ನವೋದಯ ಪ್ರಚಾರ ಪುಸ್ತಕಮಾಲೆ – ೧೯

# ಉಗ್ರಾಣ ಮಂಗೇಶರಾವ್

ಸಂತೋಷಕುಮಾರ ಗುಲ್ವಾಡಿ



ಮಹಾತ್ಮಾ ಗಾಂಧಿ
ಮೆಮೋರಿಯಲ್ ಕಾಲೇಜು
ಉಡುಪಿ 2

ನವೋದಯ ಪ್ರಚಾರ ಪುಸ್ತಕಮಾಲೆ–೧೯

# ಉಗ್ರಾಣ ಮಂಗೇಶರಾವ್

ಸಂತೋಷಕುಮಾರ ಗುಲ್ವಾಡಿ

ಮಹಾತ್ಮಾ ಗಾಂಧಿ ಮೆಮೋರಿಯಲ್ ಕಾಲೇಜು
ಉಡುಪಿ—೨.

ಸಂಪಾದಕ ಮಂಡಳಿ

ಕು. ಶಿ. ಹರಿದಾಸ ಭಟ್ಟ, ಎಂ.ಎ. (ಪ್ರಧಾನ ಸಂಪಾದಕ)

ಎಸ್. ಕೆ. ಶ್ರೀಪತಿ ಆಚಾರ್ಯ, ಎಂ.ಎ., ವಿದ್ವಾನ್

ಎನ್. ತಿರುಮಲೇಶ್ವರ ಭಟ್ಟ, ಎಂ.ಎ.

ಮೊದಲನೆಯ ಮುದ್ರಣ, 1971

ಬೆಲೆ: ೫೦ ಪೈಸೆ

ಮುದ್ರಣ

ಮಣಿಪಾಲ ಪವರ್ ಪ್ರೆಸ್, ಮಣಿಪಾಲ.

# ನವೋದಯ ಪ್ರಚಾರ-ಇಂದು

ನಮ್ಮ ನವೋದಯ ಪ್ರಚಾರ ಪುಸ್ತಕಮಾಲೆ ಕಾಲೇಜಿನ ವಾರ್ಷಿಕ ಸಾಹಿತ್ಯೋತ್ಸವ ಸಂದರ್ಭದಲ್ಲಿ ಮಾಡಿದ ಭಾಷಣಗಳನ್ನು ಮಾತ್ರವೇ ಅಲ್ಲದೆ ಕನ್ನಡ ಸಾಹಿತಿ – ಕಲಾವಿದರ ಕುರಿತು ಲಿಖಿತ ಪ್ರಬಂಧಗಳನ್ನೂ ಪ್ರಕಟಿಸಲು ತೊಡಗಿ ಹದಿನೈದು ವರ್ಷಗಳಾದುವು. 'ಲಾಭ ಬೇಡ, ನಷ್ಟವಿಲ್ಲ' ಎಂಬ ಆರ್ಥಿಕ ತಳಹದಿಯಲ್ಲಿ ಕಾಲೇಜು ಕೈಗೊಂಡ ಈ ಪ್ರಕಟನ ಸಾಹಿತ್ಯಕ್ಕೆ ಕನ್ನಡಿಗರು ಸಾಕಷ್ಟು ಪ್ರೋತ್ಸಾಹ ನೀಡಿದ್ದಾರೆ.

ಪ್ರಕಟನೆಯ ಬಗ್ಗೆ ನಾವು ಯಾವ ನಿಯಮಿತತೆಯನ್ನೂ ಇಟ್ಟು ಕೊಂಡಿಲ್ಲವಾದರೂ ಇದುವರೆಗೆ ಸುಮಾರು ಹದಿನೇಳು ಪುಸ್ತಿಕೆಗಳು ಅಚ್ಚಾಗಿವೆ. ಅದರಲ್ಲಿ ಎಷ್ಟೊ ತೀರಿವೆ. ಮುಂಬರುವ ಜಿಲ್ಲಾ ಸಾಹಿತ್ಯ ಸಮ್ಮೇಳನದ ನೆಪದಲ್ಲಿ ಮತ್ತೊಮ್ಮೆ ಈ ಜಿಲ್ಲೆ ಕನ್ನಡ ನಾಡಿನ ಸೇವೆಗೆ ಅಣಿಗೊಳಿಸಿದ ಮಹನೀಯರ ಪರಿಚಯವನ್ನು ಪ್ರಾಂಕ್ತವಾಗಿ ಪ್ರಕಟಿಸಬೇಕೆಂಬ ನಮ್ಮ ಆಶಯ ದೊಡ್ಡದೆ. ಹಲವು ಮಂದಿ ಲೇಖಕರು ಸಹಕರಿಸಿದ್ದಾರೆ. ಇದುವರೆಗೆ ಪ ಕಟಿತವಾದ (ಮರು ಪ್ರಕಟಿತವಾದ) ಗೋವಿಂದ ಪೈ, ಕಡೆಂಗೋಡ್ಲು, ಸೇಡಿಯಾಪು, ಕಾರಂತ ಅವರ ಜತೆಗೆ ಮುಳಿಯ ತಿಮ್ಮಪ್ಪಯ್ಯ, ಪಂಜೆ ಮಂಗೇಶರಾವ್, ಹುರುಳಿ ಭೀಮರಾವ್, ಉಗ್ರಾಣ ಮಂಗೇಶರಾವ್, ಎಸ್. ವೆಂಕಟರಾಜ, ಕಯ್ಯಾರ ಕಿಞ್ಞಣ್ಣ ರೈ, ಅವರನ್ನೂ ಪೋಣಿಸಿದ ಬಳಿಕ ಜಿಲ್ಲೆಯ ಸಾಹಿತ್ಯ ವ್ಯವಸಾಯದ ಒಂದು ಸಮಗ್ರ ಚಿತ್ರ ಮೂಡುವುದೆಂದು ನಾವು ಆಶಿಸಿದ್ದೇವೆ.

ಪ್ರಸ್ತುತ ಪ್ರಕಟನೆಯ ಲೇಖಕರು ಮಾಲೆಯ ಇತಿಮಿತಿ ಮತ್ತು ನಿಯಮಿತ ಅವಧಿಯೊಳಗೇನೆ ತಮ್ಮ ಕೃತಿಯನ್ನು ರಚಿಸಿ ಉಪಕರಿಸಿದ್ದಾರೆ. ಅವರಿಗೂ, ಸುಂದರವಾಗಿ ಮುದ್ರಿಸಿಕೊಟ್ಟ ಮಣಿಪಾಲ ಪವರ್ ಪ್ರೆಸ್ ಅವರಿಗೂ ನಮ್ಮ ಕೃತಜ್ಞತೆ.

ಕು. ಶಿ. ಹರಿದಾಸ ಭಟ್ಟ
ಪ್ರಧಾನ ಸಂಪಾದಕ

# ಅರಿಕೆ

ಉಗ್ರಾಣ ಮಂಗೇಶ ಮಾಮನವರ ಕುರಿತಾದ ಈ ಚಿಕ್ಕ ಪುಸ್ತಿಕೆ ಬರೆಯುವ ಪ್ರಸಂಗ ಒಂದು ಯೋಗಾಯೋಗ; ಋಣಾನುಬಂಧ. ನಾನೇನು ಅವರ ವಿದ್ಯಾರ್ಥಿಯಲ್ಲ. ಅವರ ಬಗೆಗೆ ಬರೆಯಲು, ಅವರ ನಿಕಟವರ್ತಿಗಳಾಗಿದ್ದು ಹೆಚ್ಚಿನ ಅರ್ಹತೆ ಇರುವ ಎಷ್ಟೋ ಮಂದಿ ಇದ್ದಾರೆ.

ಬಹಳ ಹಿಂದೆ ಮಂಗೇಶಮಾಮನವರು ನಮ್ಮಲ್ಲಿಗೆ ಬಂದು ಖ್ಯಾತಿವೆತ್ತ ಹರಿದಾಸರಾದ ನನ್ನಜ್ಜ ಶಿವಾನಂದ ಭಟ್ಟರೊಡನೆ ಮಾತಿಗೆ ಕೂಡುತ್ತಿದ್ದುದು ನನಗಿನ್ನೂ ನೆನಪಿದೆ. ಅನೇಕ ವಿದ್ಯಾರ್ಥಿಗಳಂತೆ ನನ್ನ ಪಾಠ್ಯಪುಸ್ತಕದಲ್ಲಿದ್ದ ಅವರ ಕವಿತೆಗಳನ್ನು, ಪಾಠಗಳನ್ನು ನಾನೂ ಕಲಿತಿದ್ದೇನೆ. ಮುಂದೆ ೧೯೬೦–೬೨ರಲ್ಲಿ ಮಂಗಳೂರಿನ ಕನ್ನಡ ಪ್ರಪಂಚ ಪ್ರಕಾಶನದ ಶ್ರೀ ಬಿ. ಶಂಕರ ಭಟ್ಟರು ಕನ್ನಡದ ಮೊದಲಿನ ಕಾದಂಬರಿಗಳಾದ, ನನ್ನ ಕುಟುಂಬದ ಹಿರಿಯರಾದ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಹಾಗೂ ಗುಲ್ವಾಡಿ ಅಣ್ಣಾಜಿರಾಯರ 'ರೋಹಿಣಿ'ಗಳ ಮರು ಪ್ರಕಟಣೆ ಮಾಡುವ ಸಂದರ್ಭದಲ್ಲಿ ಮಂಗೇಶಮಾಮನವರು ನನಗೆ ಹಲವು ರೀತಿಯಲ್ಲಿ ಮಾರ್ಗದರ್ಶನವಿತ್ತಿದ್ದರು. ಎರಡು–ಮೂರು ವರ್ಷಗಳ ಹಿಂದೆ ಅಕಸ್ಮಾತ್ತಾಗಿ ಮುಂಬಯಿಯ ದೂರದ ಗೋರೆಗಾಂವ್ ಉಪನಗರದಲ್ಲಿ, ನಮ್ಮ ಮನೆಯ ಬಳಿ ಅಕಸ್ಮಾತ್ತಾಗಿ ಅವರ ದರ್ಶನವಾಯಿತು. ದೂರದ ಮುಂಬಯಿಯಲ್ಲಿ ಇಂಥ ಭೆಟ್ಟಿ ಎಷ್ಟು ಸಂತಸಕರ ಎಂಬುದು ಇಲ್ಲಿರುವವರಿಗೇ

ಗೊತ್ತು. ಅನಂತರ ಮುಂಬಯಿಯಲ್ಲಿ ನಡೆದ ಮುದ್ದಣ ಶತಮಾನೋತ್ಸವ ಕಾಲಕ್ಕೆ ನಮ್ಮ ಸಂಪರ್ಕ ನಿಕಟವಾಯಿತು. ನಮ್ಮಿಬ್ಬರ ಮಾತೃಭಾಷೆಯೂ ಕೊಂಕಣಿಯಾದುದರಿಂದ, ಇಬ್ಬರೂ ಮಾತುಗಾರರಾದುದರಿಂದ ಈ ಸಂಬಂಧ ಕುದುರಿತು. ಅವರು ಹೇಳುತ್ತಿದ್ದ ಹಳೆಯ ನೆನಪುಗಳನ್ನು ಕೇಳಲು ನನಗೂ ಉತ್ಸಾಹ, ಆಸಕ್ತಿ. ಆ ದೃಷ್ಟಿಯಿಂದ ನಾನೂ ಅವರ ವಿದ್ಯಾರ್ಥಿಯೇ. ಈ ಪುಸ್ತಿಕೆಗೆ ಅವರ ನೆನಹುಗಳೇ ಮಾರ್ಗದರ್ಶಿ.

ಮುದ್ದಣ ಶತಮಾನೋತ್ಸವದಲ್ಲಿ ಭಾಗವಹಿಸಲು ಮುಂಬಯಿಗೆ ಬಂದ ಕು. ಶಿ. ಹರಿದಾಸಭಟ್ಟರು ಆಗಲೇ ಈ ಪುಸ್ತಿಕೆಯನ್ನು ಬರೆದು ಕೊಡಲು ನನಗೆ ಕೇಳಿಕೊಂಡಿದ್ದರು. ಮೊದಲೇ ಮುಂಬಯಿಯದು ಅವಸರದ ಯಂತ್ರ-ಜೀವನ. ಮಂಗೇಶಮಾಮನವರ ಕುರಿತಾಗಿ ನಾನು ತಿಳಿದುಕೊಂಡುದೂ ಕಡಿಮೆ. ಈ ಪರಿಸ್ಥಿತಿಯಲ್ಲಿ ಹಿರಿಯರೊಬ್ಬರ ಕುರಿತು ಬರೆದು ಅಪಚಾರ ಮಾಡಬಾರದೆಂಬ ಹೆದರಿಕೆಯೂ ಜತೆಗೂಡಿದ್ದಿತು. ಅದಕ್ಕಾಗಿ ಹರಿದಾಸಭಟ್ಟರನ್ನು ಇಂದು ನಾಳೆ ಎಂದು ಕಣ್ಣುಮುಚ್ಚಾಲೆಯಾಡಿಸಿ ಒಂದು ವರ್ಷ ಕಾಯಿಸುವ ಅಪರಾಧ ಮಾಡಿದೆ. ಜತೆಗೆ ಮಂಗೇಶಮಾಮನವರನ್ನು ಅವರ ಈ ಮುದಿ ವಯಸ್ಸಿನಲ್ಲಿ ಹೊತ್ತುಗೊತ್ತಿಲ್ಲದೆಂಬಂತೆ ಹೋಗಿ ಗಂಟೆಗಟ್ಟಳೆ ಮಾತನಾಡಿಸಿ, ಪ್ರಶ್ನೆಗಳನ್ನು ಕೇಳಿ, ಕೆದಕಿ ಪೀಡಿಸಿದೆ. ಅವರು ಸ್ವಸಂತೋಷದಿಂದ ಹಳೆ ನೆನಪುಗಳನ್ನು ನೆನಪಿಸಿ ಗಂಟೆಗಟ್ಟಳೆ ಮಾತನಾಡುತ್ತ ಕೂಡುತ್ತಿದ್ದರು. ಈ ಹಿರಿಯರಿಬ್ಬರೂ ನನ್ನನ್ನು ಕ್ಷಮಿಸುವರೆಂಬ ಧೈರ್ಯವಿದೆ.

ಇದನ್ನು ಬರೆಯುತ್ತಿರುವಾಗ ಅನೇಕ ರೀತಿಗಳಲ್ಲಿ ಉಪಕರಿಸಿದ ಮಿತ್ರರು – ಶೇಖರ ಇಡ್ಯ, ಶ್ರೀನಿವಾಸ ಹಾವನೂರ, ವ್ಯಾಸರಾಯ ಬಲ್ಲಾಳ, ಚಿದಂಬರ ದೀಕ್ಷಿತ, ವಾಸು ಬಿ. ಪುತ್ರನ್ ಮತ್ತು

ಅ. ಸು. ಕೃಷ್ಣರಾಯರಿಗೆ ನನ್ನ ನೆನಕೆಗಳು ಸಲ್ಲಬೇಕು. ಶುದ್ಧ ಹಸ್ತಪ್ರತಿ ತೆಗೆದುಕೊಟ್ಟ ನನ್ನ ತೀರ್ಥರೂಪ ರತ್ನಾಕರ ಭಟ್ಟರದು ಒಲವಿನ ಸಹಾಯ.

ಈ ಪುಸ್ತಿಕೆಯ ಕೆಲಸದಲ್ಲಿ ನನಗಾದುದು ಸ್ವಲಾಭವೇ. ಇದನ್ನು ಒಂದು ಅಭ್ಯಾಸ, ಪ್ರಯೋಗ, ಜ್ಞಾನಸಾಧನೆ ಎಂಬ ಉತ್ಸಾಹದಿಂದ ಮಾಡಿದ್ದೇನೆ. ಇಲ್ಲಿ ಕೊಟ್ಟುದು ಉಗ್ರಾಣರ ಕುರಿತಾದ ಒಂದು ಮಿಂಚು ನೋಟ ಮಾತ್ರ. ಮುಂದೆ ಅವರು ಬರೆದ ಕವನಗಳು, ಬರಹಗಳು ಸಂಗ್ರಾಹ್ಯವಾಗಿ ಒಂದು ಹೊತ್ತಗೆಯಲ್ಲಿ ಬರುವ ಪ್ರಯತ್ನಗಳಾಗಬೇಕು. ಅವುಗಳ ಅಭ್ಯಾಸ ನಡೆಯುವಂತಾಗ ಬೇಕು.

ಮುಂಬಯಿ
ಹನುಮಜ್ಜಯಂತಿ
೧೦–೪–೧೯೭೧

**ಸಂತೋಷಕುಮಾರ ಗುಲ್ವಾಡಿ**

## ನಾಂದಿ

# ಸಾಹಿತ್ಯ ಉಗ್ರಾಣ

ಈ ಶತಮಾನದ ಪ್ರಥಮಾರ್ಧದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಿಂದ ಕನ್ನಡ ಸಾಹಿತ್ಯ, ಶಿಕ್ಷಣ ಮತ್ತು ಸಾಂಸ್ಕೃತಿಕ ರಂಗಗಳಲ್ಲಿ ದುಡಿದ ನಾಲ್ವರು ಹೆಸರಾಂತ ಮಂಗೇಶರಾಯರು ಇದ್ದಾರೆ. ಗೋವಾ ದಲ್ಲಿರುವ ತಮ್ಮ ಕುಲದೇವರ ಹೆಸರು ಹೊತ್ತ ಈ ನಾಲ್ವರು ಸಾರಸ್ವತರೂ ಕನ್ನಡ ಸಾರಸ್ವತ ಕುಲಕ್ಕೇ ಪರಿಚಿತರು. ಅವರೆಲ್ಲರೂ ತಮ್ಮ ಹೆಸರುಗಳ ಮೊದಲಕ್ಷರಗಳಿಂದ–ಪ.ಮ.ರಾ., ಉ.ಮ.ರಾ., ಉ.ಮ.ರಾ. ಮತ್ತು ತೊ.ಮ.ರಾ. ಎಂದೇ ಹೆಸರಾದವರು. 'ಕವಿಶಿಷ್ಯ' – 'ಹರಟೆಮಲ್ಲ' ಪಂಜೆ ಮಂಗೇಶರಾಯರು; 'ಸಾಹಿತ್ಯ ವಿಹಾರ'ದ ಮತ್ತು ರತ್ನಾಕರವರ್ಣಿಯ 'ಭರತೇಶವೈಭವ'ವನ್ನು ಮರಳಿ ಕನ್ನಡಕ್ಕೆ ಕೊಟ್ಟು ಉಪಕರಿಸಿದ ಉಗ್ರಾಣ ಮಂಗೇಶ ರಾಯರು; ಶಿಕ್ಷಣವೇತ್ತ, ಯಕ್ಷಗಾನ ಉದ್ಧಾರಕ ಉಳ್ಳಾಲ ಮಂಗೇಶರಾಯರು ಮತ್ತು ಶಿಕ್ಷಣತಜ್ಞ ತೊನ್ಸೆ ಮಂಗೇಶ ರಾಯರು – ಇವರೆಲ್ಲರೂ, ಈ ಇಂಗ್ಲೀಷು-ಕನ್ನಡ ಪಂಡಿತರು ಜೀವನ, ಕನ್ನಡ ಸಾಹಿತ್ಯ, ಶಿಕ್ಷಣರಂಗಗಳ ಬೌದ್ಧಿಕ ಮಟ್ಟವನ್ನು ಏರಿಸಲು, ಕನ್ನಡವೆಂದರೆ ಮೂಗು ಮುರಿಯುತ್ತಿದ್ದ ಕಾಲದಲ್ಲಿ

ಕನ್ನಡಿಗರಿಗೇ ಕನ್ನಡದಲ್ಲಿ ಅಭಿರುಚಿ ಉಂಟುಮಾಡಲು ಕಾರಣರಾದರು.

ಮಕ್ಕಳ ಶಿಕ್ಷಣದಲ್ಲಿ ಇವರೆಲ್ಲರ ದೇಣಿಗೆ ಅಮೂಲ್ಯ; ಎಂದೇ ಪಂಜೆಯುವರ ಮಾತಿನಲ್ಲಿ ಹೇಳುವುದಾದರೆ "ಈ ಮಂಗಗಳ ಈಶನೆಂದು ನನಗೆ ಈ ಹೆಸರು ಇಟ್ಟರು" ಎಂಬ ಹಾಸ್ಯದ ಮಾತು ನಾಲ್ವರಿಗೂ ಅನ್ವಯಿಸುವಂಥದ್ದು. ಈ ಹೆಸರುಗಳು ಹಾಗೂ ಅವರು ದುಡಿದ ಕ್ಷೇತ್ರಗಳ ಸಮಾನತೆಯಿಂದಾಗಿ ಉ.ಮ.ರಾ. ಎಂಬಲ್ಲಿ ಅನೇಕ ಬಾರಿ ಗೊಂದಲವಾದುದೂ ಇದೆ. ಉ. ಮಂಗೇಶರಾಯರು ಎಂದರೆ ಉಳ್ಳಾಲರೋ,ಉಗ್ರಾಣರೋ ಎಂಬ ಸಂಶಯ, ಗಲಿಬಿಲಿಗೆ ಕೆಲವೊಮ್ಮೆ ಕಾರಣವಾಗಿದೆ. ಇಬ್ಬರು ಮಂಗೇಶರಾಯರಿಗೂ ಇದರಿಂದ ಕೆಲವೊಮ್ಮೆ ವಿಚಿತ್ರ ಸಮಸ್ಯೆಗಳನ್ನೂ ಎದುರಿಸಬೇಕಾಗುತ್ತಿತ್ತಂತೆ.

ದಿವಂಗತ ಪಂಜೆಯುವರ ಬಗೆಗೆ ಗೋವಿಂದ ಪೈ, ವಿ.ಸೀ. ಮತ್ತು ಕಾರಂತರು 'ಶ್ರೀ ಪಂಜೆಯುವರ ನೆನಪಿಗಾಗಿ' ಎಂಬ ಸಂಗ್ರಾಹ್ಯ ಗ್ರಂಥವನ್ನು ಸಂಪಾದಿಸಿ, ಈ ಹಿರಿಯರನ್ನು ನೆನೆದಿದ್ದಾರೆ. ಈಗ ೭೮ನೆಯ ವಯಸ್ಸಿನಲ್ಲಿರುವ ಉಗ್ರಾಣರ ಕುರಿತಾದ ಒಂದು ಪುಸ್ತಕದ ಕೊರತೆ ಎಂದಿನಿಂದಲೋ ಇದ್ದಿತ್ತು.

ಉಗ್ರಾಣ ಮಂಗೇಶರಾಯರು ಎಂದರೆ ಹಳೆಗನ್ನಡ ಸಾಹಿತ್ಯದ ಒಂದು ಮಹಾ ಉಗ್ರಾಣ. ಒಂದು ದೃಷ್ಟಿಯಲ್ಲಿ ನೋಡಿದರೆ ಅವರು ಷೇಕ್ಸ್‌ಪಿಯರ್ ಇಂಗ್ಲೀಷಿನ ಉಗ್ರಾಣಿಗಳೂ ಹೌದು. ಅವರ ಮಾತೃಭಾಷೆ ಕೊಂಕಣಿ. ಇಷ್ಟಾದರೂ ಅವರ ಅಗ್ರಪೂಜೆ ಕನ್ನಡಕ್ಕೆ; ಹಳೆಗನ್ನಡ ಕಾವ್ಯಗಳಿಗೆ. ಅವುಗಳಲ್ಲಿ ಅವರು ಕಂಡುಕೊಂಡು, ಕನ್ನಡಿಗರಿಗೆ ಆರಿಸಿಕೊಟ್ಟ ರತ್ನಗಳು ಅನರ್ಘ್ಯ. ಹಳೆ

ಗನ್ನಡದ ವಿಸ್ತಾರವಾದ ಕಾವ್ಯೋದ್ಯಾನದಲ್ಲಿ ಹಾಯಾಗಿ ವಿಹರಿಸಿ ಅದರ ಸೊಬಗನ್ನು ಸವಿದ ಅವರ ಮಾತುಗಳಲ್ಲೇ ಅದರ ಸೊಗಸು ಕೇಳಬೇಕು:

"ಕನ್ನಡ ಸಾಹಿತ್ಯೋದ್ಯಾನವು ಅತಿ ವಿಸ್ತಾರವಾಗಿದೆ. ಎಲ್ಲಕ್ಕೂ ಹಳೆಯುವಾದ, ಆದರೆ ಗುಣದಲ್ಲಿ ನಿತ್ಯವೂ ಹೊಸತಾದ ಚಂಪೂಕೃತಿಗಳು, ಮೃದುಮಧುರವಾಗಿ ಝೇಂಕರಿಸುವ ಷಟ್ಪದಗಳು, ಹೃದ್ಯವಾದ ವಚನಕಾವ್ಯಗಳು, ನವನೂತನವಾದ ಹೂಬಳ್ಳಿ ಗಿಡಗಳು ಗುಂಪುಗುಂಪಾಗಿ ಸೊಂಪುವಡೆದು ಕಂಗೊಳಿಸುತ್ತಿವೆ. ಇಲ್ಲಿ ಸದಾ ವಸಂತವು. ಇಲ್ಲಿಗೆ ಒಮ್ಮೆ ವಿಹರಿಸ ಬಂದವರು ಮತ್ತೆ ಮತ್ತೆ ಬರುವರು...ಮನಸ್ಸಿಗೆ ಬಹು ಹರ್ಷವಾದಾಗ, ಬಲು ಬೇಸರವಾದಾಗಲೂ ಬೇರೆ ಕೆಲಸವಿಲ್ಲದಾಗ, ಬೇರೆ ಕೆಲಸದಿಂದ ಬೇಸತ್ತಾಗಲೂ, ಹಾಗೂ ಮನಸ್ಸಿಗೆ ಬಂದಾಗ ಈ ಉದ್ಯಾನವನವನ್ನು ಹೊಕ್ಕು ವಿಹರಿಸುವವರು ಇಲ್ಲಿ ಬಹು ಆನಂದದಿಂದ ಕಾಲ ಕಳೆವರು.

"ಈ ಉದ್ಯಾನವನವನ್ನು ಕರುಣೆಯಿಂದ ಕಾಯುತ್ತಿರುವುದರಿಂದ ಇಲ್ಲಿ,

"ಜಗದೊಳ್ ಮುನ್ನೆಗಳ್ದಿರ್ದ ಸತ್ಕವಿಗಳಂ ಕಾವ್ಯಗಳಂ ಕೇಳ್ದು ತಾಂ
ಪೊಗಳುತಿರ್ದ ನೃಪಾಲರಂ ಪ್ರಿಯದಿನೋದುತಿರ್ದ ವಿದ್ವಾಂಸರಂ
ತೆಗೆದೊಯ್ದೋಡುವ ವೇಳೆಯಲ್ಲಿ ಜನರೊಳ್ ಕಾರುಣ್ಯಮಂ
ತಾಳ್ದು ಕಾ
ವ್ಯಗಳಂ ಬಿಟ್ಟುದರಿಂದ ನಾಂ ವಿನಯದಿಂದಾ ಕಾಲನಂ ವಂದಿಪೆಂ"*

* 'ಸಾಹಿತ್ಯವಿಹಾರ' – 'ಸಂಭಾವನೆ' 1941, ಪುಟ 312–313.

ಉಗ್ರಾಣರು ತನ್ನ ಹಳೆಗನ್ನಡದ ಪ್ರೀತಿಯಿಂದ ೧೫ನೆಯ ಶತಮಾನದ ವಿವಾದಾಸ್ಪದನಾಗಿದ್ದ 'ಶೃಂಗಾರಕವಿ ಹಂಸರಾಜ' ಬಿರುದಾಂಕಿತ ಮಹಾಕವಿ ರತ್ನಾಕರವರ್ಣಿಗೆ ಪುನರ್ಜನ್ಮ ಕೊಟ್ಟರು. ಆವನ 'ಭರತೇಶವೈಭವ'ವನ್ನು ಸಮಗ್ರವಾಗಿ ಪರಿಶೋಧಿಸಿ, ಸಂಪಾದಿಸಿ, ಪ್ರಕಟಪಡಿಸಿದರು. ಅಲ್ಲದೆ ನಾರಾಯಣ ಕವಿಯ 'ಉತ್ತರರಾಮಚರಿತ್ರೆ'ಯನ್ನು ಸಂಶೋಧಿಸಿದರು. ಇದಲ್ಲದೆ ಕಾರಂತ – ಉಗ್ರಾಣರು ಕೂಡಿ 'ಕೌಶಿಕ ರಾಮಾಯಣ'ವನ್ನೂ ಸಂಪಾದಿಸಿದರು. ಉಗ್ರಾಣರು 'ವೀರಷಟ್ಪದಿ' ಎಂಬ ಹೊಸ ಬಗೆಯ ಛಂದಸ್ಸನ್ನೂ ಸೃಷ್ಟಿಸಿದರು. ಅದಕ್ಕೆ ಹಾಗೆಂದು ನಾಮಕರಣ ಮಾಡಿದವರೂ ಅವರೆ. ದಿ। ಮೊಳಹಳ್ಳಿ ಶಿವರಾಯರು 'ಸಹಕಾರ'ವನ್ನು ನಡೆಸುತ್ತಿದ್ದಾಗ–

"ಮೆರೆಯಲಿ ಸಹಕಾರ
ಪೊರೆಯಲಿ ಬಡವರ
ಮುರಿಯಲಿ ಸಾಹುಕಾರರ
ಗರ್ವವೆಲ್ಲ"

ಎಂದು ಉಗ್ರಾಣರು ವೀರ ಚೌಪದಿಯಲ್ಲಿ ಬರೆದಿದ್ದರಂತೆ. ಈ 'ನವ್ಯ'ವನ್ನು ಸಹಿಸದ ಮಡಿವಂತರೊಬ್ಬರು 'ಸ್ವದೇಶಾಭಿಮಾನಿ'ಯಲ್ಲಿ –

"ವೀರನಹೆ, ಶೂರನಹೆ
ಭಾಪು ಉಮರಾ
ದಣಿದಿರುವೆ ನೀ
ವೀರಚೌಪದಿ ಸಾಕು"

ಎಂದು ಟೀಕಿಸಿದಾಗ ಅದಕ್ಕೆ ಷಟ್ಪದಿಯಲ್ಲೇ ಉಗ್ರಾಣರು ಉತ್ತರಿಸಿದ್ದರು. ಅವರ ಹಳೆಗನ್ನಡ ಪ್ರೀತಿ ಅಷ್ಟು ಉತ್ಕಟವಾದುದು. ಹಳೆ

ಗನ್ನಡ ಸಾಹಿತ್ಯ ಸಂಶೋಧನೆಯಲ್ಲಿ 'ಮಾನಿಕಪದಮಂ ಪದ ಸಂಧಾನಂ ಅರ್ಥಪ್ರತೀತಿಯಂ ಕವಿಹೃದಯಸ್ಥಾನಮಂ' ಎಂಬುದು ಉಗ್ರಾಣರಿಗೆ ವೇದವಾಕ್ಯ. ಈ ಕವಿಹೃದಯವನ್ನು ಅರಿಯುವ ಅವರ ಸಾಮರ್ಥ್ಯ, ಕಾವ್ಯಗಳನ್ನು ಕಾಣುವ ವಿಮರ್ಶನ ದೃಷ್ಟಿ ಅಪೂರ್ವವಾದುದು. ತಮ್ಮ ಶಿಷ್ಯರಿಗೂ ಈ ಎರಡು ವಿಶಿಷ್ಟ ದೃಷ್ಟಿಗಳನ್ನು ಅವರು ಕೊಟ್ಟಿದ್ದಾರೆ. ಕನ್ನಡದಲ್ಲಿ ಕವಿಕುಂಜರ ಹಾಗೂ ಇಂಗ್ಲೀಷಿನಲ್ಲಿ ಷೇಕ್ಸ್‌ಪಿಯರ್ ಅವರ ಅಚ್ಚುಮೆಚ್ಚಿನವರು. ಅವರು ಹಳೆಗನ್ನಡ ಸಾಹಿತ್ಯ ವಿಚಾರ ಬರೆದ ಎರಡು ಲೇಖನಮಾಲೆಗಳು ಮುಖ್ಯ: ಅ) ಸಾಹಿತ್ಯವಿಹಾರ ಆ) ಸಾಹಿತ್ಯ ಮಣಿಮಾಲೆ. ಇದಿಷ್ಟು ಅವರ ಹಳೆಗನ್ನಡ ಸಾಹಿತ್ಯ ಹವ್ಯಾಸದ ಒಂದು ವಿಹಂಗಮ ನೋಟ ಮಾತ್ರ. ಉಗ್ರಾಣರು ಬರೇ ಹಳೆಗನ್ನಡದ ಉಗ್ರಾಣ ಮಾತ್ರವಲ್ಲ; ಜೀವನವನ್ನೇ ಸಮೃದ್ಧವಾದ ಉಗ್ರಾಣವನ್ನಾಗಿ ಮಾಡಿಕೊಂಡು ಬಾಳಿದವರು.

ಇಂದು ಮುಂಬಯಿಯಲ್ಲಿ ಅವರು ತಮ್ಮ ನಿವೃತ್ತ ಜೀವನವನ್ನು ಕಳೆಯುತ್ತಿದ್ದಾರೆ. ಆಗಾಗ ಅವರನ್ನು ನಾನು ಕಾಡಿಸಿ, ಪೀಡಿಸುತ್ತಿದ್ದರೂ ಅದರ ಪರಿವೆ ಇಲ್ಲದೆ ಸ್ವಸಂತೋಷದಿಂದ ಅವರು ಗಂಟೆಗಟ್ಟಳೆ ಮಾತನಾಡುತ್ತ, ಹಳೆಯ ನೆನಪುಗಳನ್ನು ಕೆದಕುತ್ತ, ಹಳೆಗನ್ನಡದ, ತನ್ನ ಹಳೆಯ ಜೀವನದ ಉಗ್ರಾಣದ ಬಾಗಿಲನ್ನೇ ತೆರೆದಿಡುತ್ತಾರೆ. ಅದರ ಒಂದು ಮಿಂಚುನೋಟವನ್ನಷ್ಟೆ ಇಲ್ಲಿ ಕಾಣಿಸಲು ಪ್ರಯತ್ನಿಸಿದ್ದೇನೆ.

o

# ೧. ಜೀವನ

ವರ್ಷ ೧೯೧೬. ಸ್ಥಳ ಮಂಗಳೂರಿನ ಸೈಂಟ್ ಅಲೋಸಿಯಸ್ ಕಾಲೇಜು. ಅಲ್ಲಿ ಉಗ್ರಾಣ ಮಂಗೇಶರಾಯರು ಕನ್ನಡ ಶಿಕ್ಷಕರು. ಶಾಲಾ ಅಸಿಸ್ಟಾಂಟ್ ಇನ್ಸ್‌ಪೆಕ್ಟರರಾದ ಪಂಜೆಯವರು ಅಲ್ಲಿಗೆ ತಮ್ಮ ಕೆಲಸದ ನಿಮಿತ್ತ ಬಂದವರು ಉಗ್ರಾಣರನ್ನು ಕಂಡು, ಪುತ್ತೂರಿನಲ್ಲಿ ಅದೇ ವರ್ಷ ಜೂನ್ ತಿಂಗಳಿನಿಂದ ಹೈಸ್ಕೂಲು ಆರಂಭವಾಗುವುದೆಂಬ ಹರ್ಷದ ಸುದ್ದಿಯನ್ನು ಕೊಟ್ಟದಲ್ಲದೆ ಉಗ್ರಾಣರು ಅಲ್ಲಿ ಕನ್ನಡವನ್ನು ಕಲಿಸಬೇಕೆಂಬ ತನ್ನ ಅಪೇಕ್ಷೆಯನ್ನೂ ಹೇಳಿದರು.

"......ನನಗೆ ಕನ್ನಡದಲ್ಲಿದ್ದ ಪ್ರೇಮವನ್ನು ತಿಳಿದುಕೊಂಡು, ನಾನು ಎಲೋಯ್ಸಿಯಸ್ ಕಾಲೇಜಿನಲ್ಲಿ ಅದನ್ನು ವೃಥಾ ವ್ಯಯಗೊಳಿಸದೆ ಪುತ್ತೂರಿನ ಮಹಾಜನರ ಯತ್ನದಿಂದಾಗುವ ಹೊಸ ಶಾಲೆಯಲ್ಲಿ ಸದ್ವಿನಿಯೋಗ ಮಾಡಬೇಕೆಂದು ತಿಳಿಸಿದುದಲ್ಲದೆ ಅಲ್ಲಿಯ ಕನ್ನಡ ಪಂಡಿತನನ್ನಾಗಿ ನನ್ನನ್ನು ನಿಯಮಿಸುವಂತೆ ಶಾಲಾಧಿಕಾರಿಗಳನ್ನು ಅನಂತರ ಪ್ರೇರೇಪಿಸಿದುದರಿಂದ ನನ್ನ ಜೀವಮಾನದ ಬಹುಭಾಗವನ್ನು ಆ ಶಾಲೆಯಲ್ಲೇ ಸೇವೆಮಾಡಿ ಸಾರ್ಥಕವನ್ನಾಗಿ ಮಾಡಲು ನನಗೆ ಮಾರ್ಗದರ್ಶಕರಾದರು"* ಎಂದು ಉಗ್ರಾಣರೇ ಈ ವಿಚಾರ ಹೇಳಿಕೊಂಡಿದ್ದಾರೆ. ಮೂರು ವರ್ಷ ಎಲೋಸಿಯಸ್ ಕಾಲೇಜಿನಲ್ಲಿ ಕಲಿಸಿದ ಬಳಿಕ ಉಗ್ರಾಣರು ಅದೇ ವರ್ಷ ಪುತ್ತೂರಿಗೆ ಹೋದುದು ಹಾಗೆ. ತನ್ನ ಜೀವನ ಗತಿಯನ್ನು ಬದಲಾಯಿಸಿದ ಪಂಜೆಯುವರನ್ನು ತನ್ನ ಗುರು ಸಮಾನರನ್ನಾಗಿ ನೆನೆದುಕೊಂಡಿದ್ದಾರೆ ಉಗ್ರಾಣರು: "ಶ್ರೀ ಪಂಜೆ ಮಂಗೇಶ

---

* ಶ್ರೀ ಪಂಜೆ ಮಂಗೇಶರಾಯರು–'ಶ್ರೀ ಪಂಜೆಯವರ ನೆನಪಿಗಾಗಿ' ಪುಟ 27.

ರಾಯರು ನನಗೆ ಗುರು ಸಮಾನರು. ನಾನು ಅವರ ಅಪಾರವಾದ ಶಿಷ್ಯವರ್ಗದಲ್ಲಿ ಒಬ್ಬನಲ್ಲ; ಆದರೆ ನನಗೆ ಕನ್ನಡದಲ್ಲಿ ದೊರೆತ ಅಲ್ಪ ಸ್ವಲ್ಪ ಸ್ಥಾನಮಾನವು ಅವರ ವರಪ್ರಸಾದದಿಂದ" ಎಂದಿದ್ದಾರೆ.

ಉಗ್ರಾಣರು ತನ್ನ ಜೀವನವನ್ನು ವಿಕಾಸಗೊಳಿಸಿದುದು ಶಿಕ್ಷಕ ರಾಗಿ, ಕವಿಯಾಗಿ, ಕವಿಹೃದಯಿಯಾಗಿ, ಸಂಶೋಧಕರಾಗಿ, ತನ್ನ ಸುತ್ತುಮುತ್ತಲಿನವರ ಜೀವನವನ್ನು ಅರಳುವಂತೆ ಮಾಡುವ ಸ್ನೇಹಿತರಾಗಿ. ಬೋರ್ಡು ಹೈಸ್ಕೂಲಿನಲ್ಲಿ ಶಿಕ್ಷಕರಾಗಿ ೩೨ ವರ್ಷ ಸೇವೆ ಸಲ್ಲಿಸಿದ್ದರೂ ಅವರು ಬರೇ ಪಾಠ್ಯ ಪುಸ್ತಕದ ಬದನೇಕಾಯಿ ಹೇಳುವ ಪಂಡಿತರಾಗಿರಲಿಲ್ಲ. ತಮ್ಮ ವಿದ್ಯಾರ್ಥಿಗಳ ಜೀವನವನ್ನು ಸುಂದರವಾಗಿ ಮಾಡಲು, ಅವರ ಜ್ಞಾನಾಭಿವೃದ್ಧಿ ಮಾಡಲು, ವಿದ್ಯಾರ್ಥಿಗಳಲ್ಲಿ ತಮ್ಮದೇ ಆದ ವ್ಯಕ್ತಿತ್ವವನ್ನು ಬೆಳೆಸಲು ತರಗತಿ ಯ ಒಳಗೆ–ಹೊರಗೆ, ಅವರ ಬೆಳೆಯುವ ಮನಸ್ಸನ್ನು ನೀರೆರೆದು ಪೋಷಿಸಿದರು. ಮಕ್ಕಳಿಗಾಗಿ ಕವಿತೆಗಳನ್ನು ಬರೆದರು, ನಾಟಕ ಬರೆದು ಆಡಿಸಿದರು; ಪಾಠ್ಯಪುಸ್ತಕಗಳನ್ನು ಬರೆದರು. ಪುಸ್ತಕ ಸಂಗ್ರಹವನ್ನು ಮಾಡಿ, ಗ್ರಂಥ ಭಂಡಾರವನ್ನು ಬೆಳೆಸಿದರು.

ಮಕ್ಕಳನ್ನು, ವಿದ್ಯಾರ್ಥಿಗಳನ್ನು ಬಿಟ್ಟರೆ ಅವರು ಇರುತ್ತಿದ್ದುದು ವಿಚಾರವಂತರ, ಜ್ಞಾನಿಗಳ, ಸಾಹಿತಿಗಳ ಸನಿಹದಲ್ಲಿ. ಪಂಜೆ, ಮುಳಿಯ, ಉಳ್ಳಾಲ, ಗೋವಿಂದ ಪೈ, ಎಂ. ಎನ್. ಕಾಮತ್, ಮಂಜೇಶ್ವರ ಅನಂತರಾಯರು, ಹುರುಳಿ ಭೀಮರಾಯರು, ಶಿವ ರಾಮ ಕಾರಂತರು ಮೊದಲಾದವರ ಆದರ–ಸ್ನೇಹಗಳು ಅವ ರೊಂದಿಗೆ ಬೆಳೆದು ಬಂದುವು. ಉಗ್ರಾಣರೇ ಹೇಳಿಕೊಳ್ಳುವಂತೆ ಕಾರಂತರ 'ಬಾಲವನ'ದಲ್ಲಿ ಅವರು ಕಾಣಬೇಕೆಂದು ಆಶಿಸಿದ್ದ ಸಾಹಿತಿಗಳ ನಿಕಟ ಸ್ನೇಹ ಮಾಡಿಕೊಂಡರು. ಅವರೊಂದಿಗೆ ಕೂತು

'ಬಾಲವನ'ದಲ್ಲಿ ಮಾಡಿದ ಗಡದ್ದು ಭೋಜನಗಳು, ಮಾತುಗಳು, ಆಗಿನ ಸವಿನೆನಪುಗಳು ಅವರ ಮನಸ್ಸಿನಿಂದ ಇನ್ನೂ ಮಾಸಿಲ್ಲ.

ಓದುವ ಹುಚ್ಚು ಉಗ್ರಾಣರೊಂದಿಗೇ ಹುಟ್ಟಿಕೊಂಡಿರಬೇಕು. ಪುಸ್ತಕಪ್ರಿಯರೆಲ್ಲ ಅವರಿಗೂ ಪ್ರಿಯರಾದರು. ತರಗತಿ ಬಿಟ್ಟರೆ ಅವರಿರುತ್ತಿದ್ದುದು ಗ್ರಂಥಭಂಡಾರದಲ್ಲಿ. ಅವರ ಇನ್ನೊಂದು ಚಟ ಎಂದರೆ ಪ್ರವಾಸ. ಕಾರಂತರಿಗಿರುವಂತೆಯೇ ತನಗೂ ಕಾಲಿಗೆ ಚಕ್ರಗಳಿವೆ ಎಂದು ಅವರನ್ನುತ್ತಾರೆ. ಇವಿಷ್ಟಲ್ಲದೆ ಅವರು ಪುತ್ತೂರಿನ ಸಾಂಸ್ಕೃತಿಕ ಜೀವನದಲ್ಲಿ ಆಡಿದ ಪಾತ್ರವೇನು ಕಡಿಮೆಯದಲ್ಲ. ಶಾಲೆಯಲ್ಲಿ ಪಾಠ ಹೇಳಿಕೊಂಡು, ಅಷ್ಟೇ ಚೌಕಟ್ಟಿನಲ್ಲಿ ಜೀವನವನ್ನು ಅವರು ಕುಗ್ಗಿಸಿಕೊಂಡಿರಲಿಲ್ಲ. ಪುತ್ತೂರು ರೋಟರಿ ಕ್ಲಬ್ಬಿನ ಗೌರವಾಧ್ಯಕ್ಷರಾಗಿ, ವಕೀಲರಿಗಾಗಿಯೇ ಇದ್ದ ಯೂನಿಯನ್ ಕ್ಲಬ್, ಅಶೋಕಾ ಕ್ಲಬ್ ಮೊದಲಾಗಿ ಅನೇಕ ಸಂಸ್ಥೆಗಳಲ್ಲಿ ಗೌರವದ ಸ್ಥಾನ ಪಡೆದರು. ಅವರು ಕಲಿಸಿದ ಬೋರ್ಡು ಹೈಸ್ಕೂಲಿನ ಸ್ವರ್ಣ ಮಹೋತ್ಸವಕ್ಕೂ ಅವರೇ ಅಧ್ಯಕ್ಷರಾದರು. ಪುತ್ತೂರಿನಲ್ಲಿ ವಿವೇಕಾನಂದ ಕಾಲೇಜನ್ನು ಸ್ಥಾಪಿಸಿದ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾಗಿದ್ದರು; ತಾವು ಕಲಿಸಿದ ಶಾಲೆಯಲ್ಲಿ ಸೇರಿದಂದಿನಿಂದ ನಿವೃತ್ತರಾಗುವ ತನಕ ಶಿಕ್ಷಕ-ರಕ್ಷಕ ಸಂಘದ ಅಧ್ಯಕ್ಷರಾಗಿದ್ದರು. ಓರ್ವ ಕನ್ನಡ–ಇಂಗ್ಲೀಷು ಶಿಕ್ಷಕನಿಗೆ, ಅಥವಾ ಬಡ ಕನ್ನಡ ಮೇಸ್ಟ್ರಿಗೆ ಸಮಾಜದಲ್ಲಿ ಇಷ್ಟೆಲ್ಲ ಗೌರವಾದರಗಳು ದೊರೆಯಬೇಕಾದರೆ ಅವರು ಬಾಳಿದ ತುಂಬುಜೀವನದ ಕಲ್ಪನೆಯಾದೀತು. ಪುತ್ತೂರಿನ ಸಾರ್ವಜನಿಕ–ಸಾಂಸ್ಕೃತಿಕ ಜನಜೀವನದಲ್ಲಿ ಅವರು ಅಷ್ಟು ಪ್ರಭಾವ ಬೀರಿದ್ದರು.

ಉಗ್ರಾಣರ ಸಾಹಿತ್ಯ, ಶಿಕ್ಷಣಗಳ ಬಗೆಗಾದರೂ ನನಗೆ ಅಲ್ಪ ಸ್ವಲ್ಪ ತಿಳಿದಿತ್ತು; ಅವರ ಜೀವನದ ಬಗೆಗೆ ತಿಳಿಯುವ ಕುತೂಹಲ.

ಉಗ್ರಾಣರ ಹಿರಿಯರು ವಿಜಯನಗರ ಸಂಸ್ಥಾನ ಉಗ್ರಾಣಿಗಳಾಗಿದ್ದರು. ಎಂದು ಅವರ ಮನೆತನಕ್ಕೇ ಈ ಹೆಸರು ಬಂತು. ಕುಂದಾಪುರದಲ್ಲಿ ೧೮೯೩ ಸೆಪ್ಟೆಂಬರದಲ್ಲಿ, ಗಣೇಶ ಚತುರ್ಥಿಯ ಮರುದಿನ (ಋಷಿಪಂಚಮಿ) ಉಗ್ರಾಣರು ಹುಟ್ಟಿದರಂತೆ. ಅವರದೇ ಮಾತುಗಳಲ್ಲಿ ಹೇಳಬೇಕೆಂದರೆ – "ಋಷಿಪಂಚಮಿಯ ದಿನ, ಅಂದರೆ ನಮ್ಮಲ್ಲಿ ವಾಲಗ ನುಡಿಸುತ್ತ ಕೊಟ್ಟಿಗೆ (ಕೊಟ್ಟೆ – ಹಲಸಿನ ಎಲೆಯ ದೊನ್ನೆಯಲ್ಲಿ ಇಡ್ಲಿ ಹಿಟ್ಟು ಹಾಕಿ ಮಾಡುವ ದ. ಕನ್ನಡದ ಅಚ್ಚುಮೆಚ್ಚಿನ, ಹಬ್ಬದ ವಿಶಿಷ್ಟ ತಿಂಡಿ) ತಿನ್ನುವ ದಿನವೇ ನಾನು ಹುಟ್ಟಿದೆ. ತಂದೆ ಉಗ್ರಾಣ ಶಿವರಾಯರು ಮುನ್ಸೀಫ್ ಕೋರ್ಟಿನಲ್ಲಿ ಗುಮಾಸ್ತರಾಗಿದ್ದರು. ಅವರಿಗೆ ೧೯೦೧ರಲ್ಲಿ ಪುತ್ತೂರಿಗೆ ವರ್ಗವಾಯಿತು. ತನ್ಮಧ್ಯೆ ನನ್ನ ಶಾಲೆಯ ಕಲಿಯುವಿಕೆಯಾರಂಭವಾದುದು ಉಡುಪಿಯಲ್ಲಿ. ಮತ್ತೆ III ಫಾರ್ಮು ಕಲಿತುದು ಪುತ್ತೂರಿನಲ್ಲೇ. ಅನಂತರ ಹೈಸ್ಕೂಲು ಕಲಿಯಬೇಕಾದರೆ ಅಂದಿನ ದಿನಗಳಲ್ಲಿ ಮಂಗಳೂರಿಗೇ ಬರಬೇಕಾಗುತ್ತಿತ್ತು. ಅಂತೂ ಸುಮಾರು ೧೯೦೧ ರಿಂದ ೧೯೬೬ರ ವರೆಗೆ, ಹೆಚ್ಚುಕಡಿಮೆ ೬೫ ವರ್ಷ, ನನ್ನ ಆಯುಷ್ಯದ ಮುಖ್ಯ ಭಾಗವನ್ನೆಲ್ಲ ಕಳೆದುದು ಪುತ್ತೂರಿನಲ್ಲೇ. I belong to Puttur" ಎನ್ನುತ್ತಾರೆ.

ಮಂಗಳೂರಿಗೆ ಬಂದ ಉಗ್ರಾಣರು ಸೈಂಟ್ ಎಲೋಸಿಯಸ್ ಕಾಲೇಜಿನಲ್ಲಿ IV ಫಾರ್ಮಿನಿಂದ ಎಸ್.ಎಸ್.ಎಲ್.ಸಿ.ಯ ವರೆಗೆ ಕಲಿತರು. ಅನಂತರ ಗಣಪತಿ ಹೈಸ್ಕೂಲಿನಲ್ಲಿದ್ದ ಶಿಕ್ಷಣ ತರಬೇತಿ ತರಗತಿಗೆ ಸೇರಿದರು. ತೊನ್ಸೆ ಮಂಗೇಶರಾಯರು ಆಗ ಅಲ್ಲಿ ಮುಖ್ಯೋಪಾಧ್ಯಾಯರಾಗಿದ್ದರು. ನಾಲ್ವರು ಮಂಗೇಶರಾಯರುಗಳ ಭೇಟಿಯಾದುದೂ ಇಲ್ಲೇ.

ಉಗ್ರಾಣರ ಕುಟುಂಬದ ವಿಚಾರವಾಗಿ ಹೇಳುವುದಾದರೆ ಉಗ್ರಾಣ ಶಿವರಾಯರ ಮೊದಲ ಪತ್ನಿಗೆ ಮಂಗೇಶರಾಯರೂ

ಅವರ ಅಕ್ಕ ದೇವಿ ಇಬ್ಬರೇ ಮಕ್ಕಳು. ಎರಡನೆಯ ಪತ್ನಿಯಲ್ಲಿ ಐದು ಗಂಡು ಮಕ್ಕಳೂ ನಾಲ್ಕು ಹೆಣ್ಣು ಮಕ್ಕಳೂ ಆದರು. ಅಂದಿನ ದಿನಗಳನ್ನು ನೆನೆಯುತ್ತ ಉಗ್ರಾಣರೆನ್ನುತ್ತಾರೆ:

"ನಾವು ಇಬ್ಬರು ತಾಯಂದಿರ ಮಕ್ಕಳಾದರೂ ಖಾಸಾ ಅಕ್ಕ ತಂಗಿಯಂದಿರ ಮಕ್ಕಳು. ಹಾಗೆಂದು ಮಾತ್ರ ಹೆಚ್ಚಿನವರಿಗೆ ಗೊತ್ತೇ ಇಲ್ಲ. ಏಕೆಂದರೆ ನಮ್ಮೊಳಗೆ ಎಂದೂ ಒಂದಿಷ್ಟು ಭೇದವಿರಲಿಲ್ಲ. ಎಷ್ಟರ ಮಟ್ಟಿಗೆ ಎಂದರೆ ನನ್ನ ಚಿಕ್ಕತಾಯಿಯನ್ನು ನಾನು 'ಪಾಚ್ಚಿ' (ಕೊಂಕಣಿಯಲ್ಲಿ ಚಿಕ್ಕಮ್ಮ) ಎಂದು ಕರೆದರೆ ಅವರ ಎಲ್ಲ ಮಕ್ಕಳು ಕೂಡ ಅವಳನ್ನು ಹಾಗೆಯೇ ಕರೆದರು. ಬದಲಿಗೆ ನಮ್ಮೆಲ್ಲರ ತಾಯಂದಿರ ತಾಯಿಯನ್ನು 'ಅಮ್ಮಾ' ಎಂದೆವು...ನಾವು ಬೆಳೆದು ಬಂದುದು ನಿಜವಾದ ಅಣ್ಣ-ತಮ್ಮ–ಅಕ್ಕ-ತಂಗಿಯರಂತೆಯೇ. ಅಂದಿಗೂ ಇಂದಿಗೂ ಅದೇ ಸಂಬಂಧ ನಮ್ಮದು."

ಉಗ್ರಾಣರಿಗೆ ಒಬ್ಬಳೇ ಮಗಳು–ವಿಜಯಾ; ಈಗ ಶ್ರೀಮತಿ ಪಡುಬಿದ್ರಿ ದೇವರಾವ್. ಮುಂಬಯಿಯಲ್ಲಿ ಅವರಲ್ಲೇ ಈಗ ಉಗ್ರಾಣರಿದ್ದಾರೆ. ಅವರ ಶ್ರೀಮತಿಯವರು ೧೯೩೩ರಲ್ಲಿ, ಎರಡನೆಯ ಬಾರಿ ಹೆತ್ತು, ತಾಯಿ–ಮಗು ಇಬ್ಬರೂ ತೀರಿಕೊಂಡರು.

"ನೀವೇಕೆ ಮುಂದೆ ಕಲಿಯಲಿಲ್ಲ?" ಎಂದು ಕೇಳಿದೆ.

"ಮುಂದೆ ಕಾಲೇಜು ಕಲಿಸುವಷ್ಟು ಅನುಕೂಲತೆ ನನ್ನ ತಂದೆಯವರಿಗಿರಲಿಲ್ಲ. ಆದರೆ ಅದರಿಂದ ನನಗೆಂದೂ ಬೇಸರವಾದುದಿಲ್ಲ. ಏಕೆಂದರೆ ಓದುವ ನನ್ನ ಹಸಿವಿಗೆ ಈ ಪರಿಸ್ಥಿತಿ ತುಂಬ ಹೊಂದಿಕೊಂಡಿತ್ತು. ಬೇರೆಯವರು ಪರೀಕ್ಷೆಗಳನ್ನು ಪಾಸುಮಾಡಲು ಓದಿ ಮತ್ತೆ ಮರೆತರೆ ನಾನು ಓದಿನ ಪ್ರೀತಿಯಿಂದ ಓದಿದೆ; ಮನಸ್ಸಿನ ಸಂತೋಷಕ್ಕೆ ಓದಿದೆ. ಇಂಟರ್‌ಮೀಡಿಯಟ್, ಬಿ.ಎ.ಗಳೇ ಏಕೆ, ಎಂ.ಎ. ತರಗತಿಗಳ ಪುಸ್ತಕಗಳನ್ನೂ ತಿರುವಿ ಹಾಕಿದೆ. ಮುಂದೆ ಬಿ.ಎ., ಎಂ.ಎ. ಕಲಿಯುವ ವಿದ್ಯಾರ್ಥಿಗಳಿಗೂ ನಾನು ಕಲಿಸು

ವಿಕೆಯ ಪ್ರೀತಿಯಿಂದ, ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಖಾಸಗಿಯಾಗಿ ಕಲಿಸಿದೆ. ಇದರಿಂದ ಮಾತ್ರ ನಾನೂ ಎಂ.ಎ., ಎಲ್.ಟಿ. ಆಗಿರಬೇಕು ಎಂಬ ತಪ್ಪು ಕಲ್ಪನೆ ಅನೇಕರಲ್ಲಾಯಿತು. ೧೯೨೬ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘ ದವರು 'ಮುದ್ದಣ' ಗ್ರಂಥ ಪ್ರಕಟಿಸಿದಾಗ ಅದರಲ್ಲಿ ನಾನೊಂದು ಲೇಖನ ಬರೆದಿದ್ದೆ. ಆ ಸಂಪಾದಕರು ನನ್ನ ಹೆಸರಿನ ಕೊನೆಯಲ್ಲಿ ಬಿ.ಎ.,ಎಲ್.ಟಿ. ಡಿಗ್ರಿಯನ್ನೂ ಕೂಡಿಸಿಬಿಟ್ಟಿದ್ದಾರೆ. ನೋಡು... ಒಂದು ಮಾತು ನಿಜ. ಯಾವ ಎಂ.ಎ. ಕಲಿತವರಿಗೂ ಕಡಿಮೆ ಯಾಗದಷ್ಟು ನಾನು ಓದಿದ್ದೇನೆ; serious reading ಮಾಡಿದ್ದೇನೆ. ನನ್ನ ಆಸೆ ತೀರುವಷ್ಟು ಇಂಗ್ಲೀಷು–ಕನ್ನಡ ಪುಸ್ತಕ ಗಳನ್ನು ಓದಿದ್ದೇನೆ. ನನ್ನಲ್ಲಿ ಕಲಿತು ಎಂ.ಎ. ಮಾಡಿದ ಎಷ್ಟೋ ಮಂದಿ ವಿದ್ಯಾರ್ಥಿ–ವಿದ್ಯಾರ್ಥಿನಿಯರು ನನಗೆ ತಮಾಷೆಗೆ ಹೇಳಿದು ದಿದೆ– 'ನೀವು ಓದುವುದು ಏನೂ ಬಾಕಿ ಉಳಿದಿಲ್ಲ, ಸಾರ್' ಎಂದು. ಈ ಮಾತು ಸ್ವಲ್ಪಮಟ್ಟಿಗೆ ಅತಿಶಯೋಕ್ತಿಯಾದರೂ ಕಾಲೇಜು ಶಿಕ್ಷಣ ಪಡೆಯದ ನಷ್ಟವನ್ನು ನಾನು ತುಂಬಿಕೊಂಡುದು ನನ್ನ ಓದುವಿಕೆಯಿಂದಲೇ ಎಂದರೆ ತಪ್ಪಾಗದು."

ಉಗ್ರಾಣರು ಎಂ.ಎ. 'ಕಲಿತ' ವಿಚಾರದಲ್ಲಿ ಹೇಳಿದ ಒಂದು ಹಳೆಯ ನೆನಪು ತುಂಬ ಸ್ವಾರಸ್ಯಕರ. ಒಮ್ಮೆ ಅವರ ಈರ್ವರು ಅಚ್ಚುಮೆಚ್ಚಿನ ವಿದ್ಯಾರ್ಥಿಗಳು ಪರಸ್ಪರ ಪಂತ ಕಟ್ಟಿದರಂತೆ. ಉಗ್ರಾಣರು ಬಿ.ಎ.,ಎಲ್.ಟಿ. ಮಾಡಿದ್ದಾರೆಂದು ಒಬ್ಬರ ವಾದ; ಅವರು ಬಹುಶಃ ಇಂಟರ್‌ಮೀಡಿಯಟ್ ತನಕ ಓದಿ, ಆರ್ಥಿಕ ಅಡಚಣೆಯಿಂದ ಮುಂದೆ ಓದು ಮುಂದುವರಿಸಿರಲಿಕ್ಕಿಲ್ಲವೆಂದು ಎರಡನೆಯವರ ಖಾತ್ರಿ ನಂಬಿಕೆ. ಗೆದ್ದವರಿಗೆ ಸೋತವರು ದೋಸೆ-ಕಾಫಿ ಕೊಡಿಸಬೇಕು. ತೀರ್ಮಾನಕ್ಕೆ ಇಬ್ಬರೂ ಬಂದುದೂ ಉಗ್ರಾಣರಲ್ಲೇ. ಅವರು ನಗುತ್ತ ಎಂದರಂತೆ –

"ನಿಮ್ಮಿಬ್ಬರದೂ ತಪ್ಪು. ಈಗ ಕಾಫಿ-ತಿಂಡಿ ಯಾರು ಕೊಡಿಸ ಬೇಕು? ಬನ್ನಿ" ಎಂದು ಅವರಿಗೆ ದೋಸೆ-ಕಾಫಿ ಕೊಟ್ಟು ನಿಜ ಸ್ಥಿತಿ ಅರುಹಿದರಂತೆ.

ಒಳ್ಳೆಯ ಸಾಹಿತ್ಯಿಕ ಮಿತ್ರರ ಒಡನಾಟವಿದ್ದಂತೆ ಉಗ್ರಾಣರು ತಮ್ಮ ಓದುಗ ಮಿತ್ರರು, ಲಾಯರ್ ಮಿತ್ರರು, ಯಕ್ಷಗಾನ ಪ್ರಿಯರನ್ನೂ ನೆನೆದುಕೊಳ್ಳುತ್ತಾರೆ. ಪುತ್ತೂರಿನ ಹೆಸರಾಂತ ವಕೀಲರೂ ಕಾದಂಬರಿಕಾರರೂ ಆಗಿರುವ ಬೆಳ್ಳೆ ರಾಮಚಂದ್ರ ರಾಯರು ಉಗ್ರಾಣರ ಓದುಗ – ವಕೀಲ ಮಿತ್ರರು. ಅವರೊಡ ನಿದ್ದ, ತಾನು ಎರವಲು ಪಡೆದು ಓದಿದ, ಷೇಕ್ಸ್‌ಪಿಯರ್ ನಾಟಕಗಳ ಮಹಾನಟ-ರಂಗಭೂಮಿಯ ಪ್ರಪ್ರಥಮ ನೈಟ್ – ಸರ್ ಹೆನ್ರಿ ಇರ್ವಿಂಡ್ ಇವರು ಸಂಪಾದಿಸಿದ ಷೇಕ್ಸ್‌ಪಿಯರನ ಸಮಗ್ರ ಕೃತಿ ಗಳ ಹತ್ತು ಸಂಪುಟಗಳ ವೈಶಿಷ್ಟ್ಯವನ್ನು ಹೇಳುತ್ತ, "ನಮ್ಮ ಕನ್ನಡದಲ್ಲೂ ಅಂಥ ಪ್ರಯತ್ನಗಳು ಆಗಬೇಕು" ಎಂದು ಉಗ್ರಾ ಣರು ಆಶಿಸುತ್ತಾರೆ. ಷೇಕ್ಸ್‌ಪಿಯರನ ಎಲ್ಲ ಕೃತಿಗಳ ಆಳ ಅಭ್ಯಾಸ, ಸಂಗ್ರಹ, ವಿಮರ್ಶೆ, ಆತ ಉಪಯೋಗಿಸಿದ ವಿಶಿಷ್ಟ ಪದಪ್ರಯೋಗಗಳು, ವಾಕ್ಯ ರಚನೆಗಳ ಸಂಗ್ರಹ ಈ ಮಹಾ ಸಂಪುಟಗಳಲ್ಲಿವೆ. ಷೇಕ್ಸ್‌ಪಿಯರನ ಮೇಲೆ ಅಧಿಕೃತವಾಗಿ ಬರೆಯ ಬಲ್ಲ ಮಹಾ ವಿಮರ್ಶಕ ಡೌಡನ್ ಇದಕ್ಕೆ ಪೀಠಿಕೆಯನ್ನು ಬರೆ ದಿದ್ದಾರೆ. ''ನನ್ನ ಓದಿನ ಅಭಿರುಚಿಯ ಮಹಾಪೋಷಕರಲ್ಲಿ ಬೆಳ್ಳೆ ಯವರು ಪ್ರಮುಖರು.'' ಎನ್ನುತ್ತಾರೆ ಉಗ್ರಾಣರು.

ಪುತ್ತೂರಿನಲ್ಲಿದ್ದ ಹೈಕೋರ್ಟು ಎಡ್ವೋಕೇಟ್ ಸಿ. ಎಸ್. ಶಾಸ್ತ್ರಿ ಕೂಡ ಉಗ್ರಾಣರ ಮಿತ್ರಮಂಡಳಿಯ ಸದಸ್ಯರೊಬ್ಬರು. ಅವರ– ಉಗ್ರಾಣರ ಸಮಾನಶೀಲ ವ್ಯಸನಗಳೆಂದರೆ ತಾಳಮದ್ದಳೆ, ಯಕ್ಷ ಗಾನ – ಮುಂದೆ ಅದು ಕಾನೂನಿನ ವರೆಗೂ ಹರಿದಿತ್ತು. ಅದೇ ಪ್ರಕಾರ ಹೆಡ್‌ಮಾಸ್ಟರ್ ರಾಮನ್ ನಂಬಿಯಾರ್, 'ಕರ್ನಾಟಕ

ಕೇಸರಿ'ಯ ರಾವ್‌ಸಾಹೇಬ್ ಮಂಜೇಶ್ವರ ಅನಂತರಾಯರು, ತಡಗಜೆ ನಾಗೇಶರಾಯರು ಈ ಮಿತ್ರರೆಲ್ಲರೊಡನೆ ಕೂಡಿ, ಕಳೆದ ರಸನಿಮಿಷಗಳನ್ನು ಮೆಲುಕುಹಾಕಿಕೊಳ್ಳುತ್ತಾರೆ ಉಗ್ರಾಣರು.

ತನ್ನ ಜೀವನದಲ್ಲಿ ಪ್ರಭಾವ ಬೀರಿದ ಐವರು ಮಹನೀಯ – ಮಿತ್ರರ ಸವಿನೆನಪುಗಳನ್ನು ಉಗ್ರಾಣರು ಪದೇ ಪದೇ ನೆನಸುತ್ತಾರೆ. ಪಂಜೆ, ಉಳ್ಳಾಲ, ಗೋವಿಂದ ಪೈ, ಮಂಜೇಶ್ವರ ಅನಂತರಾಯರು ಮತ್ತು ಕಾರಂತರೇ ಈ ಐದು ಮಂದಿ.

"ಎಂ. ಗೋವಿಂದ ಪೈಗಳು ಮಂಜೇಶ್ವರ ಗೋವಿಂದ ಪೈಗಳಲ್ಲ – ಮಂಗಳೂರು ಗೋವಿಂದ ಪೈಗಳು" ಎನ್ನುತ್ತ ಅವರ – ತನ್ನ ಸಂಬಂಧದ ಕುರಿತಾಗಿ ಉಗ್ರಾಣರು ಹೀಗೆ ಬರೆದಿದ್ದಾರೆ :

"ಮಂಜೇಶ್ವರ ಗೋವಿಂದ ಪೈಗಳವರಿಗೂ ಮಂಜೇಶ್ವರ ಅನಂತರಾಯರಿಗೂ ಬಹು ಸ್ನೇಹ. ನನಗೂ ಅನಂತರಾಯರಿಗೂ ಅಂತಹ ಸ್ನೇಹವಿದ್ದುದರಿಂದ ಪೈಗಳವರಿಗೂ ನನಗೂ ಸಹಜವಾಗಿ ಸ್ನೇಹವಾಯಿತು. ಸಾಹಿತ್ಯ ಕ್ಷೇತ್ರದಲ್ಲಿ ಅವರ ಹೆಸರು ಆಗಲೇ ಪ್ರಸಿದ್ಧವಾಗಿತ್ತು. ಅನಂತರಾಯರು, ನಾನು ಕೂಡಾ ಹಲಕೆಲವು ಕವಿತೆಗಳನ್ನು ರಚಿಸಿ ಪೈಗಳವರ ಮೆಚ್ಚಿಕೆಗೆ ಪಾತ್ರರಾಗಿದ್ದೆವು.

"ಗೋವಿಂದ ಪೈಗಳವರಲ್ಲಿ ಆಡಂಬರ ಲವಲೇಶವಿದ್ದಿರಲಿಲ್ಲ. ನಮ್ಮ ಮೊದಲ ಭೆಟ್ಟಿಯಲ್ಲಿ ನನಗದರ ಅರಿವಾಯಿತು. ಪ್ರಾಯದಲ್ಲಿ ಅವರು ನನಗೆ ಹಿರಿಯರೆಂದು, ನಾನು ಅವರನ್ನು ಬಹುವಚನದಲ್ಲಿ ಸಂಬೋಧಿಸಿದೆ. ಅವರು ಕೂಡದು, ನಮ್ಮೊಳಗೆ ನೀನು ತಾನು ಎಂಬ ವ್ಯವಹಾರವೇ ಸಾಕೆಂದು ಸ್ಪಷ್ಟವಾಗಿ ಹೇಳಿದರು. ಅಂದಿನಿಂದ ವ್ಯವಹಾರದಲ್ಲಿ ನಮ್ಮೊಳಗೆ ಒಂದು ಸಮಾನತೆ ಉಂಟಾಯಿತು." *

ಯಾವಾಗಲೂ ನೇರಳೆ ಶಾಯಿಯಲ್ಲಿ ಬರೆಯುವ ಗೋವಿಂದ

* ರಾಷ್ಟ್ರಕವಿ ಎಂ. ಗೋವಿಂದ ಪೈಗಳವರ ವೈಶಿಷ್ಟ್ಯ – 'ದೀವಿಗೆ' ಪುಟ 68.

ಪೈಗಳು ಉಗ್ರಾಣರಿಗೆ ಕಪ್ಪು ಮಸಿಯಲ್ಲಿ ಬರೆದ ಕೆಲವು ಅಪೂರ್ವ ಪತ್ರಗಳಿದ್ದುವಂತೆ. ಅವನ್ನು 'ದೀವಿಗೆ'ಯಲ್ಲಿ ಪ್ರಕಟಿಸಲು ಹರಿದಾಸಭಟ್ಟರಿಗೆ ತಾನು ಕೊಟ್ಟೆನೆಂದು ಉಗ್ರಾಣರು ಹೇಳಿದರು.

ಉಗ್ರಾಣರ ಜೀವನದ ಬಗೆಗೆ ಬರೆಯುವಾಗ ಕಾರಂತರು ಬರದಿದ್ದರೆ ಅದು ಅಪೂರ್ಣ ಚಿತ್ರವಾದೀತು. ಪತ್ತೇದಾರಿ ಕಾದಂಬರಿಯೊಂದಿಗೆ ಕನ್ನಡ ಸಾಹಿತ್ಯ ಪ್ರಪಂಚ ಹೊಕ್ಕ ಕಾರಂತರನ್ನು ಉದ್ದೇಶಪೂರ್ಣ, ಗಂಭೀರ ಸಾಹಿತ್ಯ ರಚನೆಯೆಡೆಗೆ ಪ್ರವರ್ತಿಸಿದವರು ಉಗ್ರಾಣರೇ ಎಂಬ ವಿಚಾರ ಬಹುಶಃ ಅನೇಕ ಕಾರಂತ ಪ್ರೇಮಿಗಳಿಗೂ ತಿಳಿದಿರಲಿಕ್ಕಿಲ್ಲ. ಇವರಿಬ್ಬರೂ ಪುತ್ತೂರಿನವರು; ಕನ್ನಡ ಸಾಹಿತ್ಯ–ಸಂಸ್ಕೃತಿ–ಜೀವನದ ಸಮೃದ್ಧಿಗಾಗಿ ದುಡಿದವರು. ಅವರಿಬ್ಬರ ಸ್ನೇಹ ಸ್ವರ್ಣಮಹೋತ್ಸವ ಮಾಡುವಷ್ಟು ಹಳೆಯದು. ಎಂದೇ 'ಸ್ವರ್ಣಸ್ನೇಹ' ಎಂಬ ಲೇಖನದಲ್ಲಿ ಉಗ್ರಾಣರು ಈ ಹಳೆಯ ನೆನಪನ್ನು ಕೆದಕಿದ್ದಾರೆ –

"ನನ್ನ ಮತ್ತು ಕಾರಂತರ ಸ್ನೇಹ ಸಂದರ್ಭಕ್ಕೆ ಸ್ವರ್ಣಮಹೋತ್ಸವ ನಡೆಸುವಷ್ಟು ವರ್ಷ ಕಳೆದಿದೆ......ನಮ್ಮೊಳಗಿನ ನಿಕಟ ಸ್ನೇಹ ನಿರಾತಂಕವಾಗಿ, ನಿರಂತರವಾಗಿ ಬೆಳೆದುಬಂದಿದೆ. ಒಂದೆರಡು ಮನಃಕ್ಲೇಶದ ಸಂದರ್ಭಗಳೂ ಇಲ್ಲದೆ ಇಲ್ಲ. ಆದರೆ ಇದರಿಂದ ನಮ್ಮ ಸ್ನೇಹ ಯಾವ ರೀತಿಯಲ್ಲೂ ಕಲುಷಿತವಾಗದೆ ಇರಲು ಕಾರಂತರು ನನ್ನ ಮೇಲಿಟ್ಟ ಗೌರವಾನ್ವಿತ ಪ್ರೀತಿ ಕಾರಣ. ಕಾರಂತರು ತಮ್ಮ ಬರವಣಿಗೆಯನ್ನು ಪತ್ತೇದಾರಿ ಕಥೆಗಳಿಂದ ತೊಡಗಿದರೆಂಬುದು ಈಗಿನ ತಲೆಮಾರಿನವರಿಗೆ ತಿಳಿದಿರಲಿಕ್ಕಿಲ್ಲ. ಅವರ ಪತ್ತೇದಾರಿಗಳು ಹೊರಟಿದ್ದ ಕಾಲದಲ್ಲಿ ಒಂದು ದಿನ ನಾನು ಅವರ ಹತ್ತಿರ ಸ್ಪಷ್ಟವಾಗಿ ನೀವು ಈ ದಾರಿ ಯಾಕೆ ಹಿಡಿದಿರಿ? ಪತ್ತೇದಾರಿ ರಚನೆ ನಿಮಗೂ ವೃಥಾ ಕಾಲಹರಣ; ಓದುಗರಿಗೂ ನಿಷ್ಪ್ರಯೋಜನ ಎಂದು ನಿರ್ದಾಕ್ಷಿಣ್ಯವಾಗಿ ಟೀಕಿಸಿದೆ. ಮುಖತಃ

ನೋಡಿದರೆ ನನ್ನ ಟೀಕೆಯನ್ನು ಅವರು ಮೆಚ್ಚಿಕೊಂಡಂತೆ ತೋರ ಲಿಲ್ಲ. ಆದರೆ ಕಾರ್ಯತಃ ಅಲ್ಲೇ ಪತ್ತೇದಾರಿಗೆ ತಿಲಾಂಜಲಿ ಕೊಟ್ಟರು. ಈ ಸಂದರ್ಭವನ್ನು ಈಚೆಗೆ ಪುತ್ತೂರಿನಲ್ಲಿ ಸನ್ಮಾನ ಪಡೆದಾಗ ಜ್ಞಾಪಿಸಿಕೊಂಡು, 'ಮಂಗೇಶರಾಯರು ನನಗೆ ಗುರು ಸ್ಥಾನದಲ್ಲಿದ್ದಾರೆ. ಟೀಕೆ ಯಾರಿಗೂ ಪ್ರಿಯವಲ್ಲ. ಆದರೆ ಅವರು ಒಮ್ಮೆ ನನ್ನ ಬರಹದ ಬಗ್ಗೆ ಮಾಡಿದ ಟೀಕೆ ನನಗೆ ಹೊಸ ದಾರಿ ಕಾಣಿಸಿದೆ. ಟೀಕೆಯ ಮೂಲದಲ್ಲಿದ್ದ ಸತ್ಯ ಮತ್ತು ಸ್ನೇಹಗಳನ್ನು ಎಂದಿಗೂ ಮರೆಯಲಾರೆ' ಎಂದರು.'' *

ಕಾರಂತ – ಉಗ್ರಾಣ ಸಂಬಂಧದಲ್ಲಿ ನನ್ನ ಮಿತ್ರರೊಬ್ಬರು ಹೇಳಿದ ಮಾತು ತುಂಬ ಮಾರ್ಮಿಕ – "ದಕ್ಷಿಣ ಕನ್ನಡದ ಸಾಹಿತ್ಯಾಕಾಶದಲ್ಲಿ ಶಿವರಾಮ ಕಾರಂತರು ಚಂದ್ರನಂತಾದರೆ ಉಗ್ರಾಣರು ಒಂದು ನಕ್ಷತ್ರದಂತೆ – ಚಂದ್ರನ ಹತ್ತಿರದ ಮಿನುಗುವ ಒಂದು ತಾರೆಯಂತೆ."

ಉಗ್ರಾಣರ ಸಾಹಿತ್ಯ ಸಹವರ್ತಿಗಳಲ್ಲಿ, ಸಮಾನಾಭಿರುಚಿ ಇದ್ದ ಮಿತ್ರರ ಪೈಕಿ ೧೯೩೧ರ ಕಾರವಾರದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಮುಳಿಯ ತಿಮ್ಮಪ್ಪಯ್ಯನವರು ಒಬ್ಬರು. ಅವರು ೧೯೧೪ರಲ್ಲಿ 'ಕನ್ನಡ ಕೋಗಿಲೆ' ಮಾಸಪತ್ರಿಕೆಯನ್ನು ಆರಂಭಿಸಿ ಮೂರು ವರ್ಷಕಾಲ ನಡೆಸಿದರು. ಈ 'ಮುಳಿಯದ' ತಿಮ್ಮಪ್ಪಯ್ಯನವರ ಪತ್ರಿಕೆಗೆ ಅವರಷ್ಟೇ ಉತ್ಸಾಹದಿಂದ, ನಿಸ್ವಾರ್ಥತೆಯಿಂದ ಕೆಲಸ ಮಾಡಿದವರೆಂದರೆ ಉಗ್ರಾಣರು. 'ಕನ್ನಡ ಕೋಗಿಲೆ'ಯ ತಿಮ್ಮಪ್ಪಯ್ಯನವರ ನೆನಪುಗಳು ಇನ್ನೂ ಉಗ್ರಾಣರ ಮನಸ್ಸಿನಲ್ಲಿ ಹಸಿರಾಗಿದೆ.

"ನಾವು ಬಹಳ ಆತ್ಮೀಯ ಗೆಳೆಯರಾಗಿದ್ದೆವು. 'ಕನ್ನಡ ಕೋಗಿಲೆ' ಯಲ್ಲಿ ಯಾವ ರೀತಿಯ ಲೇಖನಗಳು, ಕವಿತೆಗಳು ಬರಬೇಕು,

---

1 'ಸ್ವರ್ಣಸ್ನೇಹ' – ಕಾರಂತ ಪ್ರಪಂಚ – ಅಭಿನಂದನ ಗ್ರಂಥ ಪು.52–53.

ಎಂಥ ವಿಷಯುಗಳಿರಬೇಕು, ಮುಖಪುಟ ಹೇಗಿರಬೇಕು ಎಂದೆಲ್ಲ ನಾವು ರಾತ್ರಿ ಹಗಲು ಚರ್ಚಿಸುತ್ತಿದ್ದೆವು. ನಾನು ಅದರ ಸಹಸಂಪಾದಕನಂತೆಯೆ – ಹಾಗೆಂದು ಪತ್ರಿಕೆಯಲ್ಲಿ ಪ್ರಕಟಿಸದಿದ್ದರೂ – ಕೆಲಸ ಮಾಡಿದೆ.......ಪತ್ರಿಕೆಯ ಮೊದಲ ವಾರ್ಷಿಕೋತ್ಸವದಂದು ಮುನ್ಸಿಫರೊಬ್ಬರನ್ನು ಮುಖ್ಯ ಅತಿಥಿಗಳಾಗಿ ಆಮಂತ್ರಿಸಿದ್ದೆವು. ಅವರು ಅಂದು ಹೇಳಿದ್ದರು – 'ಅಚ್ಚಗನ್ನಡ ಹೆಸರಿರುವ ಪತ್ರಿಕೆ ಇದೊಂದೇ' ಎಂದು. ಬಹುಶಃ ಆ ಮಾತು ಅಂದಿಗೂ ಇಂದಿಗೂ ಹೊಂದುತ್ತದೆ......'ಕನ್ನಡ ಕೋಗಿಲೆ'ಯಲ್ಲಿ ನನ್ನ ಅನೇಕ ಲೇಖನಗಳು, ಕಥೆ–ಕವಿತೆಗಳು ಪ್ರಕಟವಾಗಿದ್ದುವು. 'ಲೋಭಿ ಪ್ರಹಸನ' ಎಂಬ ಕಿರುನಾಟಕ ಪ್ರಕಟವಾದುದು ಇದರಲ್ಲೇ. ಬಾಣಭಟ್ಟನ ಕಾದಂಬರಿಯ ಒಂದು ಸಂಕ್ಷೇಪ ರೂಪ 'ಕಾದಂಬರಿ'ಯೂ ಇದರಲ್ಲಿ ಬಂದಿತ್ತು. ಅದನ್ನು ಅನೇಕ ವಿದ್ವಾಂಸರು ಮೆಚ್ಚಿಕೊಂಡಿದ್ದರು ಕೂಡ......ಮೂರು ವರ್ಷಗಳಲ್ಲಿ 'ಕೋಗಿಲೆ' ನಿಂತು ಹೋಯಿತು. ನಾನೂ ಪುತ್ತೂರಿಗೆ ಹೋದೆ. ಅನಂತರವೇ ಕೆನರಾ ಹೈಸ್ಕೂಲಿನಲ್ಲಿದ್ದ ತಿಮ್ಮಪ್ಪಯ್ಯನವರು ಎಲೋಸಿಯಸ್ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿ ಸೇರಿದುದು......ನಮ್ಮಲ್ಲಿ ಒಳ್ಳೆಯ ಪತ್ರಿಕೆಗಳು ಏಕೆ ಬಾಳುವುದಿಲ್ಲ ಗೊತ್ತೆ? ಅವುಗಳನ್ನು ಕೊಂಡುಕೊಂಡು ಓದಬೇಕು ಎಂಬ ಪ್ರೀತಿ ನಮ್ಮ ಜನಕ್ಕೆ ಇಂದಿಗೂ ಇಲ್ಲ. ಒಬ್ಬ ತೆಗೆದುಕೊಂಡ ಪತ್ರಿಕೆಯನ್ನೇ ಎರವಲು ಪಡೆದುಕೊಂಡು ಹತ್ತು-ಹನ್ನೆರಡು ಮಂದಿ ಓದುವುದು ನಮ್ಮ ಜನರ ಸಂಪ್ರದಾಯವಾಗಿಬಿಟ್ಟಿದೆ......ಮುಂದೆ ಪುತ್ತೂರಿನಲ್ಲಿ ಮಂಜೇಶ್ವರ ಅನಂತರಾಯರ 'ಕರ್ನಾಟಕ ಕೇಸರಿ'ಗಾದ ಹಣೆಯುಬರಹವಾದರೂ ಇಷ್ಟೇನೆ."

ಉಗ್ರಾಣರು ತನ್ನ ಜೀವನದಲ್ಲಿ ಕಂಡುಕೊಂಡ ಒಂದು ಖೇದಾಸ್ಪದ ಸಂಗತಿಯೆಂದರೆ ಕನ್ನಡ ಕಲಿಸುವ ಉಪಾಧ್ಯಾಯರ ಬಗೆಗಿನ

ದುರ್ಲಕ್ಷ್ಯ. "ಶಾಲೆಯ ಮ್ಯಾನೇಜ್‌ಮೆಂಟಿನವರಿಂದ ಹಿಡಿದು ವಿದ್ಯಾರ್ಥಿಗಳ ವರೆಗೂ ಕನ್ನಡ ನಾಡಿನಲ್ಲಿ ಕನ್ನಡ ಪಂಡಿತರಿಗೆ ಕಾಸಿನ ಬೆಲೆ ಇಲ್ಲ; ಇಂದಿಗೂ ಈ ಮಾತು ನಿಜ. ಕಾರವಾರದ ಸಾಹಿತ್ಯ ಸಮ್ಮೇಳನಕ್ಕೆ ಕನ್ನಡ ಪಂಡಿತರಾದ ತಿಮ್ಮಪ್ಪಯ್ಯನವರು ಅಧ್ಯಕ್ಷರಾದರೆಂದು ಇಂಗ್ಲೀಷು ಕಲಿತು, ಕನ್ನಡದಲ್ಲಿ ಬರೆಯುತ್ತಿದ್ದ ಅನೇಕ ಹಿರಿಯ ಸಾಹಿತಿಗಳಿಗೂ ಅಸಮಾಧಾನವಾಗಿತ್ತು...... ನಾವೆಲ್ಲ ಗೊಡ್ಡು ಪಂಡಿತರೆಂದೇ ಅನೇಕರ ತಿಳುವಳಿಕೆ. ಇಂದಿಗೂ 'ಹಳೆಗನ್ನಡದಲ್ಲಿ ಏನಿದೆ ಮಣ್ಣು ?' ಎನ್ನುವ ಧಾರ್ಷ್ಟ್ಯ ತೋರುವ ಇಂಗ್ಲೀಷ್ ಪದವೀಧರರಾದ ಎಷ್ಟು ಸಾಹಿತಿಗಳಿಲ್ಲ ?" ಎಂದು ಪ್ರಶ್ನಿಸುತ್ತಾರೆ ಉಗ್ರಾಣರು.

ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ಲೇಖಕರ ಬಗೆಗೆ ಕೂಡ ಎಂಥ ನಿರ್ಲಕ್ಷ್ಯತನ ತೋರಿಸಿತ್ತೆಂದು ತನ್ನ ಜೀವನದ ಒಂದು ಅನುಭವವನ್ನು ಒಂದು ದಿನ ಉಗ್ರಾಣರು ನನ್ನೊಡನೆ ಹೇಳಿದರು. ಇದೊಂದು ಹಳೆಯ ನೆನಪು. ಹಳೆಗನ್ನಡದ 'ಕುಸುಮಾವಳಿ' ಎಂಬ ಕಾವ್ಯವನ್ನು ಬಹಳ ವರ್ಷಗಳ ಹಿಂದೆ ಪರಿಷತ್ತು ಮುದ್ರಿಸಿತ್ತು. ಆದರೆ ಅದಾರೋ ಹಿರಿಯ ಸಾಹಿತಿಗಳು ಅದಕ್ಕೆ ಪೀಠಿಕೆ ಬರೆಯಲು ತಡವಾಗಿ ಅದು ಪ್ರಕಟವಾಗದೆ ಹಾಗೆಯೇ ಉಳಿದಿತ್ತು. (ಕೋಟ್ಯಾಂತರ ರೂಪಾಯಿ ಖರ್ಚುಮಾಡಿ ಸಾರ್ವಜನಿಕರಿಗಾಗಿ ಕಟ್ಟಿದ ಸೇತುವೆಯೊಂದು ಮಂತ್ರಿಗಳಿಗೆ ಪುರಸೊತ್ತಿಲ್ಲ ಎಂಬ ಕಾರಣದಿಂದ ಉದ್ಘಾಟನೆಯಾಗದೆ ಹಾಗೆಯೇ ಇರಗೊಡುವುದಿಲ್ಲವೇ ?) ಲೇಖವೊಂದನ್ನು ಬರೆಯಲು ಉಗ್ರಾಣರಿಗೆ ಆ ಪುಸ್ತಕದ ಆವಶ್ಯಕತೆ ಬಿತ್ತು. ಅದನ್ನು ತನಗೆ ರಿಜಿಸ್ಟರ್ಡ್ ಪೋಸ್ಟಿನಲ್ಲಿ ಕಳಿಸಬೇಕೆಂದು ಉಗ್ರಾಣರು ಪರಿಷತ್ತಿಗೆ ಪ್ರಾರ್ಥಿಸಿ ಪತ್ರ ಬರೆದರಂತೆ. ಆದರೆ ಪರಿಷತ್ತಿನ ಸಮಿತಿಯ ಸದಸ್ಯರು ವಿನಂತಿಯನ್ನು ಕಡೆಗಣಿಸಿ, ಪುಸ್ತಕವನ್ನು ಉಗ್ರಾಣರಿಗೆ ಕೊಡಲೊಪ್ಪಲಿಲ್ಲ. ಇದರಿಂದ ಅವರಿಗೆ ವಿಪರೀತ ನಿರಾಸೆಯಾಯಿತು. ಅದೇ

ವರ್ಷ ಪುತ್ತೂರಿಗೆ ಬಿ. ಎಂ. ಶ್ರೀಕಂಠಯ್ಯನವರು ಬಂದಾಗ ಈ ವಿಚಾರವನ್ನು ಉಗ್ರಾಣರು ಅವರಿಗೆ ತಿಳಿಸಿ, ಅವರಾದರೂ ಒಂದು ಪ್ರತಿ ಕಳಿಸಿಕೊಡಲು ಸಂಬಂಧಪಟ್ಟವರಲ್ಲಿ ಮಾತನಾಡಬೇಕು ಎಂದು ವಿನಂತಿಸಿದರಂತೆ. ಆದರೆ ಹಾಗೆ ಮಾಡುವೆನೆಂದು ಒಪ್ಪಿಕೊಂಡು ಹೋದ ಬಿ. ಎಂ. ಶ್ರೀಕಂಠಯ್ಯನವರಿಗೂ ಅದು ಸಾಧ್ಯವಾಗಲಿಲ್ಲವಂತೆ. ಮುದ್ರಣವಾದರೂ ಮುಂದೆ ಈ ಪುಸ್ತಕ ಪ್ರಕಟವಾಗಲೇ ಇಲ್ಲ. ಆದರೆ ಉಗ್ರಾಣರು ಮಾತ್ರ ಇದನ್ನು ಮರೆತಿರಲಿಲ್ಲ. ಕೆಲವು ವರ್ಷಗಳ ಬಳಿಕ ಪರಿಷತ್ತಿನವರು ಚಂಪೂಕಾವ್ಯಗಳ ಒಂದು ಕೋಶವನ್ನು ಮಾಡಲು ಯೋಜಿಸಿದಾಗ, 'ಶಾಂತಿನಾಥ ಪುರಾಣ'ದ ಭಾಗಗಳಿಂದ ಕನ್ನಡ ಶಬ್ದಗಳನ್ನಾಯ್ದು ಕೊಡಲು ಉಗ್ರಾಣರಿಗೆ ಕೇಳಿಕೊಂಡರಂತೆ. ಈ ಕೆಲಸ ಮಾಡಲು ತನಗೆ 'ಕುಸುಮಾವಳಿ' ಬೇಕೆಂದು ಉಗ್ರಾಣರು ಕೇಳಿದಾಗ ಮುದ್ರಿತವಾದ ಅನೇಕ ಫಾರಂಗಳು ಕಳೆದೋ, ಗೆದ್ದಲು ತಿಂದೋ ಹೋದುವು ಎಂದು ಪರಿಷತ್ತಿನಿಂದ ಉತ್ತರ ಬಂದಿತಂತೆ. ಇದರಿಂದ ತುಂಬ ಕೋಪಗೊಂಡ ಉಗ್ರಾಣರು ಪರಿಷತ್ತಿಗೆ ಉಗ್ರವಾಗಿಯೇ ಪತ್ರವೊಂದನ್ನು ಬರೆದು ಇದು ಅಕ್ಷಮ್ಯ ಅಪರಾಧವೆಂದು ಜಡಿದು ಬಿಟ್ಟರಂತೆ. ಕೊನೆಗೂ ಅಳಿದುಳಿದ ೮–೧೦ ಫಾರಂಗಳನ್ನು ತರಿಸಿ ಓದದೆ ಬಿಡಲಿಲ್ಲ ಉಗ್ರಾಣರು.

ವಿಷಯಗಳಲ್ಲಿ ಸಾಹಿತ್ಯವಲ್ಲದೆ ಅರ್ಥಶಾಸ್ತ್ರವು ಉಗ್ರಾಣರಿಗೆ ಪ್ರಿಯವಾದುದು. ಕಾನೂನು ಅವರ ಇನ್ನೊಂದು ಪ್ರಿಯ ವಿಷಯ. ಆಧುನಿಕ ಅರ್ಥಶಾಸ್ತ್ರದ ಚಾಣಕ್ಯರಾದ ಎಂಜಲ್ಸ್, ಕೀನ್, ಮಾಲ್ಥೂಸ್, ಮಾರ್ಸೆಲ್, ರಿಕಾರ್ಡೋ, ಹಾರ್ಟ್ಲಿ ವೀಥರ್ಸ್ ಮೊದಲಾದವರ ಅರ್ಥಶಾಸ್ತ್ರ ವಿಷಯಕ ಮೂಲಗ್ರಂಥಗಳನ್ನು ಆಮೂಲಾಗ್ರವಾಗಿ ಓದಿ ಮನನ ಮಾಡಿದ್ದಾರೆ ಉಗ್ರಾಣರು. "ಈ ಜೀವನದಲ್ಲಿ ಆಸಕ್ತಿಯುಳ್ಳ ಪ್ರತಿಯೊಬ್ಬನೂ ಅಭ್ಯಾಸಮಾಡ

ಬೇಕಾದ, ತಿಳಿಯಬೇಕಾದ ಶಾಸ್ತ್ರವಿದು" ಎಂಬುದು ಉಗ್ರಾಣರ ನಂಬಿಕೆ. ಇಂದಿನ ಜೀವನಮಟ್ಟದ ಏರುವಿಕೆಯನ್ನು ನೋಡುತ್ತ ಉಗ್ರಾಣರೆಂದರು :

"ನಾನು ಪುತ್ತೂರು ಸೇರುವಾಗ ಅಕ್ಕಿ ಮುಡಿಗೆ ಎರಡೂವರೆ ರೂಪಾಯಿ ಇದ್ದಿತ್ತು; ಪುತ್ತೂರು ಬಿಡುವಾಗ ಐವತ್ತು ರೂಪಾಯಿ ಆಗಿತ್ತು. ಅಂದರೆ ಇದಕ್ಕೆ ಏನರ್ಥ? ನಮ್ಮ ರೂಪಾಯಿಗೆ ಬೆಲೆ ಇಲ್ಲವಾಯಿತು, ಎಂದಲ್ಲವೆ? ಕರೆನ್ಸಿಗೆ ಸಮನಾಗಿ ನಮ್ಮಲ್ಲಿ ಉತ್ಪಾದನೆಯಿದೆಯೆ? ಇಂದಿನ ಧಾರಣೆ ಕಡಿಮೆ ಮಾಡಬೇಕಾದರೆ ಇರುವುದು ಒಂದೇ ಉಪಾಯ – ಹಣದುಬ್ಬರವನ್ನು ಕಡಿಮೆಗೊಳಿಸುವುದು" ಎನ್ನುತ್ತಾರೆ ಅವರು.

ಕಾನೂನಿನ ಕುರಿತಾದ ತನ್ನ ಆಸಕ್ತಿಯನ್ನು ಹೇಳುತ್ತ ಉಗ್ರಾಣರೆಂದರು: "ಪುತ್ತೂರಿನ ಲಾಯರುಗಳ ಯೂನಿಯನ್ ಕ್ಲಬ್ಬಿನಲ್ಲಿ ಲಾಯರಲ್ಲದವನೆಂದರೆ ನಾನೊಬ್ಬನೆ. ಪ್ರಜಾಪ್ರಭುತ್ವದಲ್ಲಿ ಕಾಯಿದೆ–ಕಾನೂನನ್ನು ಪ್ರತಿ ಪ್ರಜೆಯೂ ತಿಳಿದಷ್ಟು ನಮ್ಮ ಸರಕಾರವನ್ನು ನಾವು ಚೆನ್ನಾಗಿ ಆಳಬಲ್ಲೆವು. ಸಾಮಾನ್ಯ ಪ್ರಜೆಯಾಗಿ ಇದನ್ನು ತಿಳಿದುಕೊಂಡುದಕ್ಕೆ ಯೂನಿಯನ್ ಕ್ಲಬ್ಬಿನವರು ನನಗೆ ಶಿಕ್ಷೆ ಕೊಟ್ಟರು – ಕ್ಲಬ್ಬಿನ ಅಧ್ಯಕ್ಷನನ್ನಾಗಿ ಮಾಡಿದರು." ಎಂದರು ನಗುತ್ತ.

ಉಗ್ರಾಣರ ಇನ್ನೊಂದು 'ಹುಚ್ಚು' ಅವರ ಪ್ರವಾಸ ಬುದ್ಧಿ – wander lust. "ನನಗೂ ಕಾರಂತರಂತೆ ಕಾಲಿಗೆ ಚಕ್ರ. ಬಹುಶಃ ಪ್ರವಾಸಕ್ಕಾಗಿ ನಾನು ಖರ್ಚು ಮಾಡಿದಷ್ಟು ಹಣವನ್ನು ಬೇರೆ ಯಾವ ಶಾಲಾ ಉಪಾಧ್ಯಾಯನೂ ಮಾಡಿರಲಿಕ್ಕಿಲ್ಲವೇನೋ. ಸಿಮ್ಲಾದಿಂದ ಕನ್ಯಾಕುಮಾರಿ ವರೆಗೆ, ರಾಜಸ್ಥಾನದಿಂದ ಪೂರಿಯ ವರೆಗೆ ನಾನು ತಿರುಗಿದ್ದೇ ತಿರುಗಿದ್ದು. ಕರ್ನಾಟಕದ ಚಾರಿತ್ರಿಕ ಸ್ಥಳಗಳನ್ನಂತೂ ಒಂದೂ ಬಿಡದೆ ನೋಡಿದ್ದೇನೆ. ನನಗೆ ತೃಪ್ತಿಯಾಗುವ ವರೆಗೂ ನಾನು ಪ್ರವಾಸ ಮಾಡಿದ್ದೇನೆ......ಒಮ್ಮೆ ಹೀಗೆ ನಡೆ

ಯಿಂತು. ಬಾಸೆಲ್ ಮಿಶನ್ನಿನ ಮ್ಯಾನೇಜರರಾದ ಆಲ್ಟರ್ಸ್‌ಡಾಫ್ ರವರು ನನ್ನನ್ನು ಕರೆದು ಹೈಸ್ಕೂಲು ಮಕ್ಕಳಿಗಾಗಿ ಒಂದು ಕವಿತಾ ಸಂಕಲನ (ಪಾಠ್ಯಪುಸ್ತಕ) ತಯಾರಿಸಬೇಕೆಂದು ಕೇಳಿಕೊಂಡರು. ಇದೇ 'ಸಾಹಿತ್ಯ ಮಣಿಮಾಲೆ'. ಇದರಲ್ಲಿ ಸೇರಿಸಲು ಎಸ್. ಜಿ. ನರಸಿಂಹಾಚಾರ್ ಅವರ ಸಂಶೋಧನೆಯ ಭಾಗವನ್ನು ಉಪ ಯೋಗಿಸಲು ಅನುಮತಿ ಬೇಡಿ ಅವರಿಗೆ ಪತ್ರ ಬರೆದೆ. ಉತ್ತರ ವಾಗಿ ಜೋರಿನಲ್ಲಿ ಅವರದೊಂದು ರಿಜಿಸ್ಟ್ರಿ ಪತ್ರ ನನಗೆ ಬಂತು. ಇದರಿಂದ ನನಗೆ ತುಂಬ ಕೆಡುಕೆನಿಸಿದರೂ ನಾನೂ ಒಂದು ರೀತಿಯ ಛಲದಂಕನಾದೆ. 'what one fool can do another can' ಎಂಬ ಮಾತಿನಂತೆ ಮಿತ್ರರಾದ ತಡಗಜೆ ನಾಗೇಶರಾಯರೊಂದಿಗೆ ಮೈಸೂರು, ಶ್ರವಣಬೆಳಗೊಳ, ಹೊಂಬುಜ, ಮದ್ರಾಸುಗಳ ಪ್ರವಾಸ ಮಾಡಿ ಅದೇ ಸಂಶೋಧನೆ ಯನ್ನು ನಾನೂ ಮತ್ತೆ ಮಾಡಿದೆ. ನನ್ನ ಕೆಲಸಕ್ಕೆ ಕೆಲಸವೂ ಆಯಿತು; ಪ್ರವಾಸಕ್ಕೆ ಪ್ರವಾಸವೂ ಆಯಿತು...... ಕೆಲವೊಮ್ಮೆ ಕಾರಂತರೊಂದಿಗೂ ನಾನು ಊರೂರು ತಿರುಗಾಡಿದ್ದುಂಟು. ಅವರ ಸೂರ್ಯ-ಶಿವಾಲಯ (ಲಿಂಗ) ಸಿದ್ಧಾಂತ ಸಂಶೋಧನೆಯಲ್ಲಿ ಅವರೊಂದಿಗೆ ದಕ್ಷಿಣ ಕನ್ನಡ ಜಿಲ್ಲೆಯ ಶೈವದೇವಾಲಯಗಳನ್ನೆಲ್ಲ ಅವರೊಂದಿಗೆ ನಾನು ಕಂಡು ಬಂದಿದ್ದೇನೆ......ಪ್ರವಾಸ ಮನುಷ್ಯನ ಜೀವನವನ್ನು ಅರಳಿಸುತ್ತದೆ, ಅನುಭವ ಕೊಡುತ್ತದೆ.''

"ನೀವು ಪ್ರವಾಸಸಾಹಿತ್ಯ ಎಂಬುದೇನಾದರೂ ಬರೆದಿದ್ದೀರಾ? ಅಥವಾ ಪ್ರವಾಸಕಾಲಕ್ಕೆ ದಿನಚರಿ ಬರೆದು ಇಟ್ಟಿದ್ದೀರಾ?" ಎಂದು ಕೇಳಿದೆ.

"ಪ್ರವಾಸ ಹೋಗಿದ್ದಾಗ ನನ್ನ ಮಗಳಿಗೆ ಪತ್ರ ಬರೆಯುತ್ತಿದ್ದೆ. ಅಲ್ಲಲ್ಲಿ ನಾನು ಕಂಡ ವಿಶೇಷಗಳ, ವೈಶಿಷ್ಟ್ಯಗಳ ವಿಚಾರಗಳನ್ನು ಅವಳಿಗೆ ಆಗಾಗ ತಿಳಿಸುತ್ತಿದ್ದೆ. ಅವನ್ನೇ ಸಂಪಾದಿಸಿ, ಕೆಲವನ್ನು

ನೂತನ ಸಾಹಿತ್ಯ ಪಾಠಮಾಲೆಯಲ್ಲಿ 'ತಂದೆ ಮಗಳಿಗೆ ಬರೆದ ಪತ್ರಗಳು' ಎಂಬುದಾಗಿ ಪ್ರಕಟಿಸಿದ್ದೇನೆ."

ಜೀವನದಲ್ಲಿ ಉಗ್ರಾಣರು ಸ್ವಲ್ಪ ಹಟವಾದಿ ಎನ್ನುವ ಮಟ್ಟಿಗೆ ಕಟ್ಟುನಿಟ್ಟಿನವರೇ. ಅವರು ಪ್ರೌಢ ಪಾಠಮಾಲೆ ರಚನೆ ಮಾಡುತ್ತಿದ್ದಾಗ ಚ. ವಾಸುದೇವಯ್ಯನವರ "ಆಯಕೀರ್ತಿ"ಯಿಂದ 'ಪ್ರತಾಪಸಿಂಹ' ಆರಿಸಿ ಅದಕ್ಕಾಗಿ ಅವರ ಒಪ್ಪಿಗೆಗಾಗಿ ಬರೆದರು. ಈ ಲೇಖವನ್ನು ಕೊಡಲೊಪ್ಪದೆ ವಾಸುದೇವಯ್ಯನವರು ಉಗ್ರಾಣರಿಗೆ ಒಂದು ರಿಜಿಸ್ಟರ್ಡ್ ಪತ್ರ ಬರೆದರಂತೆ. ಮತ್ತೆ ತನ್ನ ಬೇರೊಂದೇ ಲೇಖವನ್ನು ಈ ಪಾಠ್ಯ ಪುಸ್ತಕದಲ್ಲಿ ಸೇರಿಸುವಂತೆ ಕೇಳಿಕೊಂಡರು. ಆದರೆ ಇದಕ್ಕೆ ಒಪ್ಪದ ಉಗ್ರಾಣರು ಅನುಮತಿ ಕೊಡುವುದಿದ್ದರೆ 'ಪ್ರತಾಪಸಿಂಹ'ವನ್ನೇ ಕಳುಹಿಸಿಕೊಡಬೇಕು; ಏಕೆಂದರೆ ಉತ್ತಮ ಲೇಖಕರ ಶ್ರೇಷ್ಠ ಲೇಖಗಳನ್ನೇ ತಾನು ಈ ಪಾಠ್ಯ ಪುಸ್ತಕದಲ್ಲಿ ಹಾಕುವುದೆಂದು ನಿರ್ಧರಿಸಿದ್ದೇನೆ. ಎಂದು ಬರೆದರು. ಕೊನೆಗೂ ವಾಸುದೇವಯ್ಯನವರೇ ಈ ಮಾತಿಗೆ ಒಪ್ಪಿದರಂತೆ.

ಇಂಥ ಅನುಭವಗಳು ಉಗ್ರಾಣರ ಜೀವನದಲ್ಲಿ ಹಲವು. ಅದಕ್ಕಾಗಿ ಅವರು ಪಂಜೆ, ಗೋವಿಂದ ಪೈ, ಕಾರಂತ, ಆರ್. ನರಸಿಂಹಾಚಾರ್, ರಾಜರತ್ನಂ ಮೊದಲಾದವರೊಂದಿಗೆಲ್ಲ 'ಪ್ರೇಮಕಲಹ' ಮಾಡಿದುದಿದೆ. "ಇದೆಲ್ಲ ಆಗದಿದ್ದರೆ ಜೀವನದಲ್ಲಿ ಏನು ಸವಿ ಇದೆ?" ಎನ್ನುತ್ತಾರೆ ನಗುತ್ತ ಉಗ್ರಾಣರು.

○

## ೨. ಸಾಹಿತ್ಯ

ಉಗ್ರಾಣರು ಕನ್ನಡ-ಇಂಗ್ಲೀಷು ಉಭಯ ಭಾಷಾ ಪಂಡಿತರು. ಅವರ ಸಾಹಿತ್ಯವನ್ನು ಮುಖ್ಯವಾಗಿ ಮೂರು ಬಗೆಯಲ್ಲಿ ವಿಂಗಡಿಸ ಬಹುದು:

ಅ) ಕವಿತೆಗಳು.

ಆ) ಶಿಕ್ಷಣಸಾಹಿತ್ಯ.

ಇ) ಸಾಹಿತ್ಯಪ್ರಬಂಧಗಳು ಮತ್ತು ಸಂಶೋಧನ ಲೇಖನಗಳು.

ಆರಂಭದಲ್ಲಿ ಅವರ ಒಲವು ಹೆಚ್ಚಾಗಿ ಇಂಗ್ಲೀಷಿನ ಕಡೆಗೇ ಇದ್ದರೂ ಪಂಜೆಯವರು ಆವರಲ್ಲಿ ಕನ್ನಡಾಭಿಮಾನವನ್ನೂ ಬೆಳೆಸಿ, ಪೋಷಿಸಲು ಬಹಳ ಮಟ್ಟಿಗೆ ಕಾರಣರಾದರು. ಅದನ್ನು ನೆನೆದು ಕೊಂಡು ಉಗ್ರಾಣರು ಬರೆದಿದ್ದಾರೆ :

"......ನನಗೆ ಓದುವುದಕ್ಕಾಗಿ ಅವರು ಕೊಟ್ಟ ಕವಿರಾಜ ಮಾರ್ಗ, ಅಜಿತನಾಥಪುರಾಣ, ಗಿರಿಜಾಕಲ್ಯಾಣಗಳನ್ನು ನಾನು ಓದಿಯಾದ ಮೇಲೆ ಅವರ ಪ್ರಸಾದರೂಪವಾಗಿ ನನ್ನಲ್ಲೇ ಇಟ್ಟು ಕೊಂಡು ಅವನ್ನು ಅವರಿಗೆ ಮರಳಿ ಕೊಡದೇ ಬಹುಕಾಲವಾದ ಮೇಲೆ ಧರ್ಮಕ್ಕೆ ಬಂದುದು ದಾನವಾಗಲೆಂದು ನಾನು ಸೇವೆ ಮಾಡುತ್ತಿದ್ದ ಶಾಲೆಯ ಸರಸ್ವತೀ ಭಂಡಾರಕ್ಕೆ ಒಪ್ಪಿಸಿದೆ"* ಎಂದು ತನ್ನ ಹಾಗೂ ಪಂಜೆಯವರ ಕನ್ನಡದ ಕೊಂಡುಕೊಳ್ಳುವಿಕೆಗಳ ಲೆಕ್ಕಾಚಾರವನ್ನು ನಿಸ್ಪೃಹತೆಯಿಂದ ಬರೆದಿದ್ದಾರೆ.

ಶಾಲೆಯಲ್ಲಿರುವಾಗಲೇ ಓದುವುದರ ಜತೆಯಲ್ಲೇ ಬರೆಯುವ ಗೀಳು ಉಗ್ರಾಣರಿಗೆ ಹಿಡಿದಿತ್ತು. ಆರಂಭದಲ್ಲಿ ಮುಳಿಯ ತಿಮ್ಮ ಪ್ಪಯ್ಯನವರ 'ಕನ್ನಡ ಕೋಗಿಲೆ', ಮಂಜೇಶ್ವರ ಅನಂತರಾಯರ 'ಕರ್ನಾಟಕ ಕೇಸರಿ', 'ಸ್ವದೇಶಾಭಿಮಾನಿ', ಹುರುಳಿ ಭೀಮ

---

*ಶ್ರೀ ಪಂಜೆ ಮಂಗೇಶರಾಯರು – 'ಶ್ರೀ ಪಂಜೆಯವರ ನೆನಪಿಗಾಗಿ' ಪು. 27.

ರಾಯರ 'ಕಂಠೀರವ', ಕಡಂಗೋಡ್ಲು ಶಂಕರ ಭಟ್ಟರ 'ರಾಷ್ಟ್ರ ಬಂಧು' ಪತ್ರಿಕೆಗಳಲ್ಲಿ ಅವರ ಕವನಗಳು ಕಾಣಿಸಿದುವು. ಆದರೆ ಉಗ್ರಾಣರ ಸಾಹಿತ್ಯ ಕೃಷಿ ನಿಜವಾಗಿ ಆರಂಭವಾದುದೇ ಪುತ್ತೂರಿನಲ್ಲಿ. ಪಂಜೆಯವರಂತೆಯೇ ಹುಟ್ಟು ಶಿಕ್ಷಕರಾದ ಅವರು ಮೊದ ಮೊದಲು ಮಕ್ಕಳಿಗಾಗಿ ಚಿಕ್ಕ ಚಿಕ್ಕ ಕವನಗಳ;ನ್ನ ಬರೆದರು. ಕೆಲವಕ್ಕೆ ಇಂಗ್ಲೀಷು ಕವಿತೆಗಳು ಸ್ಫೂರ್ತಿಯಾದರೆ ಕೆಲವು ಸ್ವತಂತ್ರ ಕೃತಿಗಳು. ಆದರೆ ಅವರು ರಚಿಸಿದ ಹೆಚ್ಚಿನ ಶಿಶುಸಾಹಿತ್ಯದ ಸ್ಫೂರ್ತಿ ಎಲ್ಲವೂ ಅವರ ಮಗಳು ವಿಜಯಾ. ಮಿತ್ರಮಂಡಳಿಯವರು ೧೯೩೩ರಲ್ಲಿ ಪ್ರಕಟಿಸಿದ 'ನಮ್ಮ ಕವಿತೆಗಳು' ಎಂಬ ಬೇರೆ ಬೇರೆ ಕವಿಗಳ ಸಂಗ್ರಹದಲ್ಲಿರುವ ಉಗ್ರಾಣರ 'ಎನ್ನ ಮುದ್ದಿನ ಗಿಣಿಯೆ' ಎಂಬ ಮಕ್ಕಳ ಪದ್ಯ ಇದಕ್ಕೊಂದು ಉತ್ತಮ ಉದಾಹರಣೆ. ಅದನ್ನು ಓದುವಾಗ ತಂದೆ ತನ್ನ ಪ್ರೀತಿಯ ಮಗಳನ್ನು ಮುದ್ದಿಸುವ ಚಿತ್ರ ಕಣ್ಣಿಗೆ ಕಟ್ಟುತ್ತದೆ. ಪ್ರತಿ ಪದ್ಯದ ಮುಕ್ತಾಯದೊಂದಿಗೆ ಆವರಣದಲ್ಲಿ ಉಗ್ರಾಣರು ಕೀಟಲೆಯ ಮಾತುಗಳನ್ನು ಬರೆದುದು ಇದರದೊಂದು ವೈಶಿಷ್ಟ್ಯ.

## ಎನ್ನ ಮುದ್ದಿನ ಗಿಣಿಯೆ

ಎನ್ನ ಮುದ್ದಿನ ಗಿಣಿಯೆ । ಎನ್ನ ಸೊಬಗಿನ ಕಣಿಯೆ ।
ಎನ್ನ ಭಾಗ್ಯದ ಸಿರಿಯ । ಚೆಲುವಿನ ಕುವರಿಯ ।
ನಿನ್ನ ಜನನದ ದಿನಕೆ – (ಚೆನ್ನಾಯ್ತೆಲೆಗೆ! ಮನಕೆ
ಸನ್ನುತವೆ? ತಡೆ ಮಗಳ ಈ ಕಿರುಕುಳಗಳ)

ಬಾರೆನ್ನ ಮನೆ ಬೆಳಗೆ । ಸಾರು ಬೇಗನೆ ಬಳಿಗೆ ।
ತೋರು ನಿನ್ನಯ ಮೊಗವ; ಬೀರೆನಗೆ ಸೊಗವ.
ಮೀರಿಹುದು ಸುಖವಿಂದು – (ಯಾರೆ? ಬೇಗನೆ ಬಂದು
ನೀರ ಬಿಂದಿಗೆ ಎಳಕೊ! ಹೊ! ಕವಚಿದಳಕೊ ।)

ಕಂದ! ಜನನದ ದಿನದ ಸಂದ ನಿನ್ನಯ ಬಿನದ
ದಿಂದ ನಲವಾಂತುದೆದೆ ಬಂದಪ್ಪು ಮುದದೆ.
ನಿಂದು ನೋಡುವುದೇಕೆ? – ಮುಂದೋಡಿದಳು! ಜೋಕೆ!
ಸುಂದರಿಯೆ! ಪೋ ಪೋಗು! ಹಾಕಿದಳು ಲಾಗು!

ಮಗಳೆ! ಮಾಣಿಕಗೊಂಬೆ! ತೆಗೆದು ತಕ್ಕಿಸಿಕೊಂಬೆ
ನಗುನಗುತ ಬಾರೆನ್ನ    ಬಗೆಗೊಳಿಪ ರನ್ನ
ಸಿಗಲಾರೆಯಾ ನನಗೆ – (ನೆಗೆದಳಿದೊ ಕಿರುಮನೆಗೆ
ತೆಗೆದೆನ್ನ ಮುಸಿಕುಡಿಕೆ! ಬೇಗವಳ ಹುಡುಕೆ!)

ಪುಟ್ಟಮ್ಮ! ನೀ ಮುತ್ತ ಕೊಟ್ಟೆನ್ನಪ್ಪುತ್ತ
ಹುಟ್ಟು ದಿನದುಡುಗೊರೆಯ ಪಡೆಯಬಹುದರಿಯ!
ತಟ್ಟನಿಲ್ಲಿಗೆ ಬಾರೆ – (ಬೊಟ್ಟಿಟ್ಟವಳ ಮೋರೆ
ನಿಟ್ಟಿಸೆಲೆ ಮನದನ್ನೆ! ಮುಸಿಗಾಯ್ತು, ಸೊನ್ನೆ!)

ಅಮ್ಮಣ್ಣಿ! ಬಾ, ನಿನ್ನನ್ನೊಮ್ಮೆ ತಬ್ಬುವೆ, ಚಿನ್ನ
ಸುಮ್ಮಾನವಹುದಿಂದು ಜನ್ಮದಿನವೆಂದು.
ಸಮ್ಮುಖಕೆ ಬಾ, ಪುರುಳೆ! – (ಸುಮ್ಮನಿರಲೀ ತರಳೆ;
ಗುಮ್ಮನೆಂದಿದೊ ಬಂದಳೇನದರ ಚಂದ!)

ಕಡು ಬೆಡಗಿನೆಲೆ ಬಾಲೆ! ಇಡುವೆ ಮುತ್ತಿನ ಮಾಲೆ
ಬಿಡಿಸಿದಕೊ ಸಿಕ್ಕಿದಳು! ಮುತ್ತನಿಕ್ಕಿದಳು!
ಒಡನೆ ಮುದ್ದಾಡಿದೆನು – (ಮಡದಿ ಮಣಿ, ನೋಡಿದನು.
ಬೆಡಗಲ್ಲವೆ ಪೇಳೆ ಮುತ್ತಿನಾ ಮಾಲೆ?)

ಮಕ್ಕಳಿಗಾಗಿ ಉಗ್ರಾಣರು ಬರೆದ ಕವಿತೆಗಳು 'ಪಂಜರದ ಗಿಳಿ,'

'ತನ್ನ ಮನೆ', 'ಎನ್ನ ಹಾಸಿಗೆ', 'ಡೊಂಬರಾಟ' 'ಹಕ್ಕಿಯ ಜಗತ್ತು' 'ಕನಕಾಂಗಿ' ಮೊದಲಾದುವು. 'ಕನಕಾಂಗಿ' ಅವರ ನೀಳ್ಗವನ. ಇವೆಲ್ಲ ಮಕ್ಕಳೂ ಹಾಡಿ, ಅಭಿನಯಿಸಬಹುದಾದಂಥ ಶಿಶುಗೀತೆಗಳು. ಸ್ವಲ್ಪ ಬಳೆದ ಮಕ್ಕಳಿಗೆ ಅವರು 'ಕಲಾಮಹಿಮೆ'ಯಂಥ ಪದ್ಯಗಳನ್ನೂ ಬರೆದಿದ್ದಾರೆ.

ನೀರ ನೀರೆಯರಂದು ಬೇರಾಗಲಿಹುದೆಂದು ।
ಸಾರಿ ಮನದಣಿಯೆ ಮುದ್ದಾಡುತಗಲಿದರು ॥
ದೂರದಲಿ ನಿಂದ ಕವಿಯೆದೆಯೊಳಿರು ಸೇರಿ ನಿಲ ।
ಲಾರದೊಡನೊಂದು ಹಾಡಾಗಿ ರಂಜಿಸಿತು ॥ ೧ ॥

ನೀರ ನೀರೆಯರ ಕವಿ, ರವಿವರ್ಣಗಳ ಚಿತ್ರ ।
ಗಾರ, ಗಾಯಕ ರಾಗ, ರೂಪ ಶಿಲ್ಪಿಗಳ ॥
ಧಾರಿಣಿಯನೀ ಸೃಷ್ಟಿಸಿದ ಶಿಲ್ಪವರ್ಯನವ ।
ನಾದಯಿದು ನೋಡಿ ಮನಮೆಚ್ಚಿ ಹರಸಿದನು ॥ ೬ ॥

ಲೋಕವಿದು ದುಃಖಮಯವೆಂಬುದದು ನಿಜವಹುದು ।
ನಾಕಸುಖವಿದರೊಳಿರಬೇಕೆಂದರಹುದೇ ?
ಶೋಕಿಸದೆ ಸುಖಬಿಂದುಗಳ ಚೆಲ್ಲಗೊಡದೆ ಸುವಿ– ।
ವೇಕದಿಂದಿಂತ ಕಲೆಯೊಳಗೆ ಚಿರಗೊಳಿಸೈ ॥ ೭ ॥

ಈ ಪದ್ಯವು ಆ ಕಾಲದಲ್ಲಿ ತುಂಬ ಮೆಚ್ಚುಗೆ ಪಡೆದು ಮಂಗಳೂರು, ಧಾರವಾಡದ ಪತ್ರಿಕೆಗಳಲ್ಲಿ ಕೆಲವು ಬಾರಿ ಪ್ರಕಟಗೊಂಡಿತ್ತು.

ಅದೇ ಹೊತ್ತಿಗೆ ಉಗ್ರಾಣರು ತನ್ನ ನೀಳ್ಗವನ 'ಕನಕಾಂಗಿ'ಯಯನ್ನು ಬರೆದಿದ್ದರು. ಅದನ್ನು ಸ್ವಲ್ಪ ಮೊಟಕುಗೊಳಿಸಿ, 'ಕನ್ನಡ

ಕವಿತೆಗಳು' ಎಂಬ ಸಂಗ್ರಹದಲ್ಲಿ ಪ್ರಕಟಿಸಲು ಪಂಜೆಯವರು ಕೇಳಿ ಕೊಂಡರಂತೆ. ತನ್ನ ಕವನಕ್ಕೆ ಇಂಥ 'ಚಿತ್ರಹಿಂಸೆ' ಬೇಡ ಎಂದು ಉಗ್ರಾಣರು ಅದನ್ನು ಕೊಡಲಿಲ್ಲವಂತೆ. ಬದಲು ಚಿಕ್ಕದಾದ ಬೇರೊಂದೇ ಕವನವನ್ನು ಪ್ರಕಟಿಸಲು ಕೊಟ್ಟರು.

ಹಳೆಗನ್ನಡ ಪ್ರಿಯರಾದ ಉಗ್ರಾಣರು ಕಾವ್ಯದ ಮಟ್ಟಿಗೆ ಸಂಪ್ರದಾಯ ಶರಣರೆ. ಆದರೆ ಹೊಸ ಪ್ರಯೋಗಗಳನ್ನು ಮಾಡಿ, ಹೊಸ ದಾರಿ ಮಾಡುವ ಪ್ರಗತಿಪರರೂ ಆಗಿದ್ದಾರವರು. ಅದನ್ನು ಅವರೇ ಹೇಳಿಕೊಂಡಿದ್ದಾರೆ –

“ಪಂಜೆಯವರು ಸರ್ಪಭೂಷಣ ಶಿವಯೋಗಿಯ ಸರಸವಾದ ಕನ್ನಡ ಹಾಡುಗಳು ಅಚ್ಚಾಗುವುದಕ್ಕೆ ಮೊದಲಿಂದಲೇ ಅದರ ಪ್ರತಿ ತೆಗೆದು ಇಟ್ಟುಕೊಂಡಿದ್ದುದು ನನ್ನ ಕಣ್ಣಿಗೆ ಬಿತ್ತು. ನಾನು ಅವನ್ನು ಓದಿಕೊಂಡು ಅವುಗಳ ಲಹರಿಗೆ ಮನಸೋತು ಅವುಗಳಂತೆ ಕೆಲಕೆಲವು ಪುಟ್ಟ ಕವಿತೆಗಳನ್ನು ಮಾಡಿ ಆ ಪದ್ಯ ವಿಶೇಷಕ್ಕೆ ವೀರಚೌಪದಿಯೆಂದು ಹೆಸರಿಟ್ಟುದನ್ನು ಪಂಜೆಯವರು ಮೆಚ್ಚಿ ತಾನೂ ಆ ರೀತಿಯಾಗಿ ಆ ಮೊದಲೂ ಅನಂತರವೂ ಬರೆದ ಕವನ ಕ್ರಮಕ್ಕೆ ಆ ಹೆಸರನ್ನೇ ಇಟ್ಟು ಅದನ್ನು ಪ್ರಚಾರಗೊಳಿಸಿದರು; ಮಾತ್ರವಲ್ಲ ಅವರು ಸಂಪಾದಿಸಿದ ಪದ್ಯ ಸಂಗ್ರಹದಲ್ಲಿ ನನ್ನ ಕವಿತೆಗೆಡೆಕೊಟ್ಟು ಅವರು ನನ್ನನ್ನು ಬಹು ಪ್ರೋತ್ಸಾಹಿಸಿದರು.”*

ಈ ಶತಮಾನದ ಆರಂಭದಲ್ಲಿ ದಕ್ಷಿಣ ಕನ್ನಡದಲ್ಲಿ ಪ್ರಗತಿಶೀಲ ಕಾವ್ಯದ ಒಂದು ಹೊಸ ಪೀಳಿಗೆ ಉದಯಿಸಿತು. ಈ ಕಾಲವನ್ನು ನವೋದಯ ಕಾಲದ ಒಂದು ಮುಖ್ಯ ಹಂತವೆಂದು ಪರಿಗಣಿಸಬೇಕು. ಸಣ್ಣ ಕತೆ, ಪ್ರಾಸರಹಿತ ಕವಿತೆಗಳು, ಪದ್ಯ ಕಾವ್ಯಗಳ ರಚನೆಗಳಾಗಿ ದಕ್ಷಿಣ ಕನ್ನಡ ಜಿಲ್ಲೆ ಕರ್ನಾಟಕಕ್ಕೆ ಹೊಸ ಹಾದಿ ಹಾಕಿ ತೋರಿಸಿತು.

---

1 ಶ್ರೀ ಪಂಜೆ ಮಂಗೇಶರಾಯರು – 'ಶ್ರೀ ಪಂಜೆಯವರ ನೆನಪಿಗಾಗಿ' ಪು. 27.

ಪಂಜೆ ಮಂಗೇಶರಾಯರು, ಮ. ಗೋವಿಂದ ಪೈ, ಮುಳಿಯ ತಿಮ್ಮಪ್ಪಯ್ಯ, ಎಂ. ಎನ್. ಕಾಮತ್, ಹುರುಳಿ ಭೀಮರಾಯರು, ಕಡಂಗೋಡ್ಲು ಶಂಕರಭಟ್ಟರು – ಇವರೆಲ್ಲ ಮುದ್ದಣನ ನಾಡಿನಲ್ಲಿ ಹುಟ್ಟಿ ಅವನು ಆರಂಭಿಸಿದ ಹೊಸತನವನ್ನು ಇನ್ನೂ ಊರ್ಜಿತ ಗೊಳಿಸಿದರು. ಗೋವಿಂದ ಪೈಗಳು ಪ್ರಾಸಬಿಟ್ಟು ಕವಿತೆ ಬರೆಯು ಲಾರಂಭಿಸಿ ಹೊಸ ಮಾರ್ಗವನ್ನೇ ತುಳಿದರು. ಆಗ ಅದನ್ನು ಸಂಪ್ರದಾಯಪ್ರಿಯರನೇಕರು ಖಂಡಿಸಿದ್ದರು. ಆದರೆ ಇಂದು ನವ್ಯದ ಹೆಸರಿನಲ್ಲಿ ವಸ್ತುನಿಷ್ಠವಾಗಿ ಚರ್ಚೆ ಮಾಡದೆ ಅನೇಕ ಕವಿ ಗಳು ವೈಯಕ್ತಿಕವಾಗಿ ಜರೆದುಕೊಳ್ಳುವಂತೆ ಅಂದು ನಡೆದಿರಲಿಲ್ಲ ವೆಂದು ಉಗ್ರಾಣರು ನೆನಸಿಕೊಳ್ಳುತ್ತಾರೆ. ಗೋವಿಂದ ಪೈಗಳ ನವ್ಯವನ್ನು ತಾನು ವಿರೋಧಿಸಿದ ಬಗೆಗೆ ಉಗ್ರಾಣರೇ ಬರೆದಿದ್ದಾರೆ:

“......ಪಂಜೆಯವರು ಪ್ರಾಸಪ್ರಿಯರು. ಶಿಷ್ಯ ಪೈಗಳವರು ಪ್ರಾಸದ ಸಂಕಲೆಯನ್ನು ಕಡಿದು ಹಾಕಿದವರು. ಆದರೂ ಆ ಬಗೆಗೆ ಗುರುಗಳ ಆಶೀರ್ವಾದವಿತ್ತೆಂದು ನಾನು ಕೇಳಿದ್ದೇನೆ.

“‘ನುತ ಶಬ್ದಾಲಂಕಾರದೊಳತಿಶಯಮದು ಕನ್ನಡಕ್ಕೆ ಸತತಂ ಪ್ರಾಸಂ’ ಎಂಬುದು ಕವಿರಾಜಮಾರ್ಗವಾದರೆ ಅದನ್ನು ಅಲ್ಲ ಗಳೆದು ‘ಆನೆ ನಡೆದುದೆ ಮಾರ್ಗ’ ಎಂಬಂತೆ ಹೊಸ ಮಾರ್ಗ ವನ್ನು ಕನ್ನಡಿಗರಿಗೆ ಹಾಕಿಕೊಟ್ಟಿದ್ದುದು ಪೈಗಳಲ್ಲಿ ಕಾಣುವ ದೊಡ್ಡ ವೈಶಿಷ್ಟ್ಯವೆನ್ನಬಹುದು. ಅದಕ್ಕೆ ಧೈರ್ಯಸಾಹಸಗಳು ಬೇಕು. ಸಂಪ್ರದಾಯಪ್ರಿಯರ ನಿಷ್ಠುರ ಟೀಕೆಗಳಿಗೆ ಎದೆಗೊಡಬೇಕು. ಪೈಗಳವರು ಆ ಬಗೆಗೆ ಎಂಟೆದೆಯುಳ್ಳವರೆನ್ನಬಹುದು.

“ಇಲ್ಲಿ ಪೈಗಳವರ ಉದಾರ ಹೃದಯತೆಗೆ ಒಂದು ನಿದರ್ಶನ ಕೊಡಬಹುದು. ಪ್ರಾಸರಹಿತ ಟೀಕೆಗಳ ಗೊಂದಲದಲ್ಲಿ ಅವರ ಸ್ನೇಹಿತರಾಗಿದ್ದ ಮಂಜೇಶ್ವರ ಅನಂತರಾಯರು ಅವರನ್ನೇ ಬಹು ನಿಷ್ಠುರವಾಗಿ ಟೀಕಿಸಿದ್ದರು. ಆಗ ಆ ವಿಷಯದಲ್ಲಿ ಒಂದೆರಡು

ಲೇಖನಗಳನ್ನು ನಾನೂ ಬರೆದಿದ್ದೆ. ('ಕನ್ನಡ ಕೋಗಿಲೆ'ಯಲ್ಲಿ–೧೯೧೭) ಅನಂತರಾಯರು ಮಾಡಿದ ಟೀಕೆ, ಅವರ ನೆರಳಂತಿದ್ದ ನನ್ನ ಬರಹವೇ ಎಂದು ಪೈಗಳವರು ಅಲ್ಲಲ್ಲಿ ಹೇಳಿಕೊಂಡು ಬರುತ್ತಿದ್ದರು. ಆದರೂ ನಾನು ಸಂಧಿಸಿದಾಗಲೆಲ್ಲ ಅದರ ಮಾತೆತ್ತದೆ ನನ್ನಲ್ಲಿ ಯಾವ ತರದ ವರ್ತನೆಯ ವ್ಯತ್ಯಾಸವನ್ನು ಕಾಣಿಸದೇ ಇದ್ದರು. ನಾನು ಕೂಡ ಅವರ ಗುಣವನ್ನು ಮನಸ್ಸಿನಲ್ಲಿ ಮೆಚ್ಚಿದೆನೇ ಹೊರತು ಆ ಟೀಕೆಯ ನಿಜವಾದ ಕರ್ತೃ ಯಾರೆಂದು ತಿಳಿಸಲೇ ಇಲ್ಲ."*

ಹಾಗೆಂದು ಗೋವಿಂದ ಪೈಗಳವರ ಕೆಲವು ಹೊಸ ಪ್ರಯೋಗಗಳನ್ನು ಉಗ್ರಾಣರು ಮನಸಾರೆ ಮೆಚ್ಚಿ, ಹೊಗಳಿದ್ದುಂಟು. ಉದಾಹರಣೆಗೆ ಪೈಯವರ 'ಇಸು' ಪ್ರತ್ಯಯ. ಕನ್ನಡದ ಮಡಿ ಪಂಡಿತರನೇಕರು ಪೈಯವರ ಈ 'ಅಧಿಕಪ್ರಸಂಗತನ'ವನ್ನು ಕಟುವಾಗಿ ಟೀಕಿಸಿದ್ದರು. ಆದರೆ ಸಂಸ್ಕೃತ ಪದಗಳಿಗೆ ಕನ್ನಡ ಪ್ರತ್ಯಯ ಹಚ್ಚಿ ಕ್ರಿಯಾಪದ ಮಾಡುವ ಈ ಪ್ರಯೋಗಕ್ಕೆ ಉಗ್ರಾಣರೂ ಮನಸೋತರು. ಪೈಗಳಿಗೆ ಬೆಂಬಲ ಕೊಟ್ಟು ಇಂಥ ಪ್ರಯೋಗಗಳನ್ನು ಮಹಾಕವಿಗಳೂ ಮಾಡಿದ್ದಾರೆಂದು ದೃಷ್ಟಾಂತ ಕೊಟ್ಟರು. ಕವಿಕುಂಜರನ 'ಅರ್ಧನೇಮಿಪುರಾಣ'ದಲ್ಲಿ "ಭಾವಾ! ನಮೋಸ್ತು; ತಮ್ಮಡಿ ದೇವಕಿ ಮೈನೆರೆದಳೆಂದು ಬಂದಿರೆ? – ಯಾವುದನುಡ ತಂದಿರಿ? ಬತ್ತಲೆ ಬಂದಿರಿ! ಎಂದಾ ವಧು ಮೈದುನಿಸಿ ನಗುತ–ಮಡ್ಡಂ ಬಂದಳ್" ಎಂದೇ ಮೊದಲಾದ ಪ್ರಯೋಗಗಳನ್ನು ಆಧಾರವಾಗಿ ಕೊಟ್ಟರು.

ಇಂದಿರುವಂತೆಯೇ ಅಂದೂ ನವೋದಯ –ನವ್ಯಗಳ ನಡುವೆ ಚರ್ಚೆಗಳಾಗುತ್ತಿದ್ದುವಂತೆ. ಬಿ. ಎಂ. ಶ್ರೀಕಂಠಯ್ಯನವರ ಹೊಸತನವನ್ನೂ ಆಗ ಅದೆಷ್ಟೋ ಮಂದಿ ಟೀಕಿಸಿದ್ದರು. ಆ ಹಿನ್ನೆಲೆ

---

* ರಾಷ್ಟ್ರಕವಿ ಎಂ. ಗೋವಿಂದ ಪೈಗಳವರ ವೈಶಿಷ್ಟ್ಯ–'ದೀವಿಗೆ' ಪುಟ 68.

ಯಲ್ಲಿ ಉಗ್ರಾಣರು ಒಂದು ಪದ್ಯ ಬರೆದರಂತೆ. ಸಾಹಿತ್ಯದೇವಿಗೆ ಹಳೆಯದು ಪ್ರಿಯವೋ ಹೊಸತು ಪ್ರಿಯವೊ? ಎಂದು ಕವಿ ಪ್ರಶ್ನಿಸುತ್ತಾನೆ. ಎರಡರಲ್ಲೂ ಒಳಿತು – ಕೆಡುಕುಗಳಿವೆ, ಎನ್ನುತ್ತಾನೆ. ಈ ಪದ್ಯದ ಕೆಲವು ಚರಣಗಳು ಹಳೆ ಹೊಸತರ ನೆವದಿಂದ ಕಚ್ಚಾಡುವ ಇಂದಿನ ಕವಿಗಳಿಗೆ ದಾರಿದೀಪ –

ಆವುದ್ ಹಿತ ನಿನಗೆ ದೇವಿ ಭಾರತಿ ಹೇಳು
ಕಾವ್ಯದಲಿ ಹೊಸ ಹಳೆಯ ಮಾರ್ಗವೆರಡರಲಿ

ಕಳೆಗೂಡಿದಾ ಕಬ್ಬವಿಳೆಯೊಳಗೆ ರಂಜಿಪುದು
ಹಳೆಯದಾಗದು ನಿಚ್ಚ ಹೊಸತಪ್ಪುದು
ಬುಧರ ಹೃದಯವು ಬೇರೆ ವಿಧವಾದರೇನಾಯ್ತು
ಸುಧೆಗೆ ರುಚಿ ಬೇರಹುದೆ ಗುಣಕೆ ಮತ್ಸರವೆ

ಆದರೆ ಗುಣದೋಷಗಳು ಭರಿತವಿಹ ಎರಡರೊಳು
ಕೊರತೆ ಇಲ್ಲದೆ ವಸ್ತು ಧರೆಯಳೆಲ್ಲಿಹುದು ?
ಎಮಗೆ ಹಳತೇ ಮೆಚ್ಚು ತಮಗೆ ಹೊಸತೇ ಹೆಚ್ಚು
ಅಮಮ! ಏತಕೆ ಹುಚ್ಚು ನಿಮಗೆಂಬೆ ನಾನು

ಬಗೆಯ ಹೊಸ ಹಳೆಯೆಂಬ ಜಗದೊಳು ಹುರುಳಿಲ್ಲ
ನಗುವೆ ನೀನೆರಡು ಕಡೆಯುವರೆಗ್ಗ ತನಕೆ
ಹೊಸತೇನು ಹಳತೇನು ರಸವನೊಸರುವ ಕಬ್ಬ
ರಸದಾಳಿ ಕಬ್ಬಹುದು ನಿನಗೊಪ್ಪದಿಹುದೇ*

* ಆವುದ್ ಹಿತ ನಿನಗೆ ದೇವಿ ಭಾರತಿ ಹೇಳು – "ನಮ್ಮ ಕವಿತೆಗಳು".

ಸಂಪ್ರದಾಯ ಪ್ರಿಯರಾದರೂ ನಾನು ಕಂಡಂತೆ ಉಗ್ರಾಣರಿಗೆ ಸಾಹಿತ್ಯದಲ್ಲಿ ಅಂಥ ಮಡಿ ಇಲ್ಲ. ಇಸು ಪ್ರತ್ಯಯವನ್ನು ಇಂಗ್ಲೀಷು ಪದಗಳಿಗೂ ಹಚ್ಚಿ ಬರೆಯುವುದು ನನಗೂ ಮೋಜೆನಿಸಿತ್ತು. ಕಾರಂತರ 'ಅಪೂರ್ವ ಪಶ್ಚಿಮ'ದಲ್ಲಿ ಬಂದ, 'ಡ್ಯಾನ್ಸಿಸು' ಎಂಬ ಪದಪ್ರಯೋಗ ನನಗೆ ತುಂಬ ಮೆಚ್ಚಿಗೆಯಾಯಿತು. 'ಕಾರಂತ–ಹೆಬ್ಬಾರ ಮೈತ್ರಿ' ಎಂಬ ನನ್ನ ಲೇಖನವೊಂದರಲ್ಲಿ "ಹೆಬ್ಬಾರರಿಗೆ ಫೋನಿಸಿದೆ" ಎಂದು ಒಂದು ಕಡೆ ಬರೆದಿದ್ದೆ. ಈ ಪ್ರಯೋಗವನ್ನು ಉಗ್ರಾಣರು ಬಹುವಾಗಿ ಮೆಚ್ಚಿಕೊಂಡು ಕನ್ನಡ ಭಾಷೆಯ ವಿಪುಲ ಸಂಪತ್ತಿಗೆ ಇಂಥ ಶಬ್ದಗಳ ರಚನೆ ಅವಶ್ಯವೆಂದರು. ಇದು ಎರಡು ವರ್ಷಗಳ ಹಿಂದಿನ ಮಾತು.

ಉಗ್ರಾಣರಲ್ಲಿ ಹಳೆಗನ್ನಡದ ರುಚಿಯೊಂದಿಗೇ ಸಂಶೋಧನಾ ಪ್ರವೃತ್ತಿಯೂ ಬೆಳೆದುದನ್ನು ಕಾಣಬಹುದು. ಸಾಹಿತ್ಯದಲ್ಲಿ ವಿಶಿಷ್ಟ ವಾದ ವಿಮರ್ಶನ ದೃಷ್ಟಿ – critical eye ಯನ್ನು ಬೆಳೆಸಿ ಕೊಂಡ ಅವರಲ್ಲಿ ಇದೊಂದು ಹವ್ಯಾಸವಾಗಿ ಬೆಳೆದಿತ್ತು. ಹಳೆ ಗನ್ನಡ ಕವಿಗಳ ಸುಂದರ ಕಲ್ಪನೆಗಳನ್ನು (ಉದಾ: ರಾಘವಾಂಕನ 'ಹರಿಶ್ಚಂದ್ರಕಾವ್ಯ'ದ ಮಾತು – 'ಮಾಯದ ಅಬಲೆಯರ ಮಾಯದ ಬಲೆ') 'ಕವಿತಾ' ಮತ್ತು 'ನೀತಿ' ಎಂಬ ಹೆಸರಿನಡಿ ಯಲ್ಲಿ, ಕಂದಪದ್ಯಗಳಲ್ಲಿ ಅವರು ಸುಂದರವಾಗಿ ಸಂಗ್ರಹಿಸಿ ಬರೆದು ದನ್ನು ನೋಡಿ ಬಿ. ಎಂ. ಶ್ರೀಯವರೂ ಮೆಚ್ಚಿಕೊಂಡಿದ್ದರು. ಇಂಥದ್ದೇ ಅವರ ಇನ್ನೊಂದು ಸಂಗ್ರಹ 'ಕಾವ್ಯರತ್ನಾಕರ'.

ಮಂಗಳೂರು ಸಾಹಿತ್ಯ ಸಮ್ಮೇಳನದಲ್ಲಿ ಕೆಲವು ಅಪೂರ್ವ ಹಳೆ ಗನ್ನಡ ಸಂಶೋಧನೆಗಳ ಕುರಿತಾಗಿ ಬರೆದ ಪ್ರಬಂಧವನ್ನು ಉಗ್ರಾ ಣರು ಓದಿದ್ದರು. ಆರ್. ನರಸಿಂಹಾಚಾರ್ಯರಿಗೂ ದೊರೆಯದ 'ಉತ್ತರ ರಾಮಚರಿತೆ'ಯೂ ಇದರಲ್ಲಿ ಒಂದು. (ಅದು ಇತ್ತೀಚೆಗೆ ವೆಂಕಟರಾಯಾಚಾರ್ಯ ಸುರತ್ಕಲ್ ಅವರಿಂದ ಪ್ರಕಟಗೊಂಡಿದೆ.)

‘ಸಾಹಿತ್ಯವಿಹಾರ’ ಮತ್ತು ‘ಸಾಹಿತ್ಯಮಣಿಮಾಲೆ’ ಎಂಬ ಶೀರ್ಷಿಕೆಯಲ್ಲಿ ಉಗ್ರಾಣರು ಅನೇಕ ಪಾಂಡಿತ್ಯಪೂರ್ಣ ಲೇಖನ, ಸಂಶೋಧನಾತ್ಮಕ ಪ್ರಬಂಧಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಸಾಹಿತ್ಯ ಮಣಿಮಾಲೆಯ ಮೊದಲ ಭಾಗವು ಬಾಸೆಲ್ ಮಿಶನ್‌ರವರಿಂದ ಪ್ರಕಟಿಸಲ್ಪಟ್ಟಿತ್ತು. ಎರಡನೆಯ ಭಾಗ ಪ್ರಕಟವಾಗಬೇಕಾದರೆ ದ್ವಿತೀಯ ಮಹಾಯುದ್ಧ ಆರಂಭವಾಗಿ ಈ ಜರ್ಮನ್ ಮಿಶನಿನ ಮ್ಯಾನೇಜರನ ದಸ್ತಗಿರಿಯಾಗಿ ಆ ಕೆಲಸ ಅರ್ಧಕ್ಕೇ ನಿಂತಿತು. ಈ ಎರಡು ಶೀರ್ಷಿಕೆಗಳಡಿಯಲ್ಲಿ ಬಂದ ಲೇಖನಗಳ ಸಂಗ್ರಹವು ಇನ್ನಾದರೂ ಆಗುವುದೊಳಿತು.

‘ಸಾಹಿತ್ಯವಿಹಾರ’ದಲ್ಲಿ ಆಂಡಯ್ಯನ ‘ಕಬ್ಬಿಗರ ಕಾವ’ದಲ್ಲಿ ಬಂದ ಕನ್ನಡ ಶಬ್ದಗಳ ಕುರಿತಾಗಿ ಉಗ್ರಾಣರ ಅಪೂರ್ವ ಲೇಖನವೊಂದಿದೆ. ಕನ್ನಡ ಸಾಹಿತ್ಯ ಪರಿಷತ್ತಿನವರು ಏರ್ಪಡಿಸಿದ ಪ್ರಬಂಧ ಸ್ಪರ್ಧೆಯಲ್ಲಿ ಉಗ್ರಾಣರು ಬರೆದ ‘ಜಯನೃಪಕಾವ್ಯ’ಕ್ಕೆ ಬಹುಮಾನ ಬಂದಿತ್ತು. ಮೈಸೂರು ವಿಶ್ವವಿದ್ಯಾಲಯದವರು ಪ್ರಕಟಿಸಿದ ‘ಷಟ್ಪದಿ ಕಾವ್ಯ ನಿಘಂಟು’ ಕೆಲಸದಲ್ಲಿ ಉಗ್ರಾಣರು ಕೆಲವು ಭಾಗಗಳನ್ನು ಬರೆದಿದ್ದಾರೆ. ಇದಕ್ಕಾಗಿ ವಿಶ್ವವಿದ್ಯಾಲಯವು ಅವರಿಗೆ ರೇಷ್ಮೆ ಶಾಲು ಹೊದಿಸಿ ಗೌರವಿಸಿದುದುಂಟು.

ಸಂಶೋಧನಾ ಕಾರ್ಯದಲ್ಲಿ ಉಗ್ರಾಣರು ‘ಕವಿಹೃದಯ ಸ್ಥಾನಮಂ’ ಎಂಬುದಕ್ಕೆ ಅಗ್ರಪಟ್ಟ ಕೊಡುತ್ತಾರೆ. ಕಂಡುದನ್ನು ವಿಮರ್ಶನ ದೃಷ್ಟಿಯಿಂದ ಮತ್ತೆ ಪರೀಕ್ಷಿಸುತ್ತಾರೆ. ಇಂಥ ಎಷ್ಟೋ ಸಂದಿಗ್ಧಗಳಲ್ಲಿ ಅವರು ಆರ್. ನರಸಿಂಹಾಚಾರ್‌ರಂಥ ಸಂಶೋಧಕರೊಡನೆಯೂ ತರ್ಕಿಸಿದುದುಂಟು; ಗೆದ್ದುದುಂಟು. ಅವರ ಈ ದೃಷ್ಟಿಯನ್ನು ಮೆಚ್ಚಿಕೊಂಡು, ಬೆಳೆಸಿಕೊಂಡ ಅವರ ಪ್ರಮುಖ ಶಿಷ್ಯ ಹೆಸರಾಂತ ಸಾಹಿತಿ ಸೇಡಿಯಾಪು ಕೃಷ್ಣಭಟ್ಟರು ತನ್ನ ‘ಖಂಡಚಂದ್ರ’ವನ್ನು ಗುರು ಉ.ಮ.ರಾ.ಗೆ ಅರ್ಪಿಸಿದ್ದಾರೆ.

ತನ್ನ ವಿಮರ್ಶನ ದೃಷ್ಟಿಯ ಕುರಿತು ಉಗ್ರಾಣರು ಕೆಲವು ಉದಾಹರಣೆಗಳನ್ನು ಕೊಟ್ಟರು. "ಪಂಪಭಾರತದಲ್ಲಿ ಭೀಮನು ದ್ರೌಪದಿಗೆ ಹೇಳುವ 'ನಂಬು ನಂಬು ಎನ್ನ ಕಣ್ಣೊಳ್ ಕಿಡಿಯುಂ ಕೆಂಡಮುಂ ಸೂಸು – ನಂಬು ಪಂಕೇಜಪತ್ರೇಕ್ಷಣೆ' ಎನ್ನುವ ಮಾತು ಮೇಲಿಂದ ಮೇಲೆ ಓದಿದರೆ ಭೀಮನು ಬರೇ ಕೋಪದ ಭರದಲ್ಲಿ ಹೇಳಿದುದಂತೆ ಕಂಡರೂ ಹಾಗಲ್ಲ. ಕಣ್ಣಿಳ ಕಿಡಿ – ಎಂಬುದು ಅಗ್ನಿಸಾಕ್ಷಿಯಾಗಿ ವಿವಾಹವಾದ ದ್ರೌಪದಿಯೊಂದಿಗೆ ಪ್ರತಿಜ್ಞೆ ಮಾಡಿದುದರಿಂದ ಅದನ್ನು ನಂಬು ಎಂದು ಕವಿಹೃದಯದಿಂದ ಅರ್ಥ ಕೊಡುತ್ತದೆ. ಬರೇ ಶಬ್ದಾರ್ಥವನ್ನು ಹಿಡಿದರೆ ಕವಿಯ ಕಲ್ಪನೆಯ ಅರಿವು ನಮಗೆ ಹೇಗಾದೀತು? ಮೇಲಿಂದ ಮೇಲೆ ಕಂಡ ಕವಿತೆಯ ಅರ್ಥದಲ್ಲಿ ಸೌಂದರ್ಯವಿಲ್ಲ.

"ಮೈಸೂರು ವಿಶ್ವವಿದ್ಯಾಲಯದವರು ಅನೇಕ ಹಳೆಗನ್ನಡ ಕವಿಗಳ 'ಸಂಗ್ರಹ'ಗಳನ್ನು ಪ್ರಕಟಿಸಿದ್ದಾರೆ. ಈ ಕವಿಗಳ ಪದ್ಯಗಳಿಗೆ ಚಿತ್ರಹಿಂಸೆ ಮಾಡಿ ಅಲ್ಲಲ್ಲಿ ಇಷ್ಟಿಷ್ಟು ಸಂಗ್ರಹಿಸಿ, ಪ್ರಕಟಿಸಿ, ಕೊನೆಯಲ್ಲಿ ಬಿಟ್ಟ ಕವಿತೆಗಳ ಪಟ್ಟಿ ಕೊಡುತ್ತಾರೆ. ಈ ಮಾತನ್ನು ಏಕೆ ಹೇಳಿದೆನೆಂದರೆ ಜನ್ನನ 'ಯಶೋಧರ ಚರಿತೆ'ಯ ಇಂಥ ಸಂಗ್ರಹವೊಂದು ಪ್ರಕಟವಾಗಿದೆ. ಇದರಲ್ಲಿ 'ವಾಣಿ ಪಾರ್ವತಿ ಮಾಡಿದ ಜಾಣೆಂತುಟೊ ಕವಿ ಭಾಲಲೋಚನಂ ಸುಮನೋಬಾಣನ ಸುತನೆಂದು ಅಖಿಲ ಶೋಣಿಗೆ ಪೆಸರಾಯ್ತು ಕೂರ್ಮೆಗಿದು ಕೌತುಕಮೆ?' ಎಂಬ ಮುಖ್ಯವಾದ ಪದ್ಯವನ್ನು ಸಂಗ್ರಹದಲ್ಲಿ ಬಿಟ್ಟು ಅನುಬಂಧದಲ್ಲಿ ಸೇರಿಸಿದ್ದಾರೆ. ಈ ಪದ್ಯವನ್ನು ಆರ್. ನರಸಿಂಹಾಚಾರ್ ಆದಿಯಾಗಿ ಅನೇಕರು ಮೇಲಿಂದ ಮೇಲೆ ಓದಿ ಅಪಾರ್ಥ ಮಾಡಿಕೊಂಡಿದ್ದಾರೆ. ಇಲ್ಲಿ ಸುಮನೋಬಾಣನೆಂದರೆ ಜನ್ನನ ತಂದೆಯೆಂದು ಆರ್. ನರಸಿಂಹಾಚಾರ್‌ರವರ ವಾದ. ಜನ್ನನ 'ಅನಂತನಾಥಪುರಾಣ'ದಲ್ಲಿ ಅವನು ಸುಮನೋಬಾಣನ ಶಿಷ್ಯ

ಎಂದಿದೆ. ಗುರು ಶಿಷ್ಯ ಸಂಬಂಧ ತಂದೆ-ಮಗನಂತೆಯೇ; ಹರಿಹರ-ರಾಘವಾಂಕನಂತೆ. ಇಲ್ಲಿ 'ಕವಿ ಭಾಲಲೋಚನಂ' ಎಂಬುದು ಜನ್ನನ ಬಿರುದು. ಸುಮನೋಬಾಣನೆಂದರೆ ಕಾಮದೇವನೆಂಬುದರ್ಥವಲ್ಲದೆ ಬೇರೇನಲ್ಲ...ಇಂಥ ಸಂದಿಗ್ಧಗಳು ಬರುವುದೇಕೆಂದರೆ ಒಂದು ಶಬ್ದಕ್ಕೆ ಅನೇಕ ಅರ್ಥಗಳನ್ನು ಕಲ್ಪಿಸಿದುದರಿಂದ. ನನ್ನ ಅನುಭವದಲ್ಲಿ ಕನ್ನಡದಲ್ಲಾಗಲಿ, ಇಂಗ್ಲೀಷಿನಲ್ಲಾಗಲಿ ಒಂದು ಶಬ್ದಕ್ಕೆ ಒಂದೇ ಅರ್ಥ. ಉದಾಹರಣೆಗೆ 'ದೇಹ' ಹಾಗೂ 'ಶರೀರ' ಎಂಬೆರಡು ಶಬ್ದಗಳು ಸುಮಾರಾಗಿ ಒಂದೇ ಅರ್ಥಕ್ಕೆ ಎರಡು ಶಬ್ದಗಳಿರುವಂತೆ ಕಾಣುವುದಿಲ್ಲವೆ? ಆದರೆ ಇವೆರಡಕ್ಕೂ ಬೇರೆಯೇ ಅರ್ಥಗಳಿವೆ. ದೇಹ ಎಂಬುದು ಬೆಳೆಯುವಂಥದ್ದು – ಮಕ್ಕಳದು; ಶರೀರ ಎಂಬುದು ಬೆಳೆದವರದು–ಪ್ರಾಯವಾದವರದು; ಕುಗ್ಗುವಂಥದ್ದು. ಇದೇ ಅದರ ವಿಶಿಷ್ಟ ಅರ್ಥ."

ಜೈನ ಸಾಹಿತ್ಯದಲ್ಲಿ ಉಗ್ರಾಣರದು ಆಳವಾದ ಅಭ್ಯಾಸ. ರತ್ನಾಕರವರ್ಣಿಯ 'ಭರತೇಶವೈಭವ'ವನ್ನು ಮರಳಿ ಸಂಪಾದಿಸಿ ಕೊಟ್ಟ ಶ್ರೇಯಸ್ಸು ಅವರದು. 'ರತ್ನಾಕರಾಧೀಶ್ವರ ಶತಕ,' 'ಅಪರಾಜಿತೇಶ್ವರ ಶತಕ,' 'ತ್ರಿಲೋಕ ಶತಕ ' ಮತ್ತು 'ಭರತೇಶ ವೈಭವ'ಗಳ ಕವಿ ಬೇರೆ ಬೇರೆ ಎಂದು ಸಂಶೋಧಕ ಆರ್. ನರಸಿಂಹಾಚಾರ್ ಅದರು ವಾದಿಸಿದುದನ್ನು ಉಗ್ರಾಣರು ಹಾಗೂ ಶತಕತ್ರಯದ ಸಂಪಾದಕರಾದ ಶಾಂತಿರಾಜ ಶಾಸ್ತ್ರಿಗಳು ಪ್ರತಿಭಟಿಸಿದ್ದಾರೆ. ಮಾತ್ರವಲ್ಲ ರತ್ನಾಕರವರ್ಣಿಯು ಕನ್ನಡದ ಮಹಾಕವಿಗಳಲ್ಲಿ ಒಬ್ಬನೆಂದು ತೋರಿಸಿಕೊಟ್ಟಿದ್ದಾರೆ. ತುಳುನಾಡಿನಲ್ಲಿ ಕನ್ನಡದ ಮಹಾಕವಿ ಹುಟ್ಟಬಹುದೆ? ಎಂದು ಅಚ್ಚಗನ್ನಡ ವಿದ್ವಾಂಸರೊಬ್ಬರು ಪ್ರಶ್ನಿಸಿ, ಸಾಂಗತ್ಯದಲ್ಲಿ ಏನು ಮಹಾಕಾವ್ಯ ಬರೆಯಬಹುದು ಎಂದು ಒಮ್ಮೆ ಹೀಗಳೆದರಂತೆ. ಆಗ ಉಗ್ರಾಣರು ಕೇಳಿದರಂತೆ – "ಹಾಲು ಕುಡಿಯುವವನಿಗೆ ಎಮ್ಮೆಯ ಜಾತಿ ಏಕೆ?"

ಉಗ್ರಾಣರು ಭರತೇಶವೈಭವವನ್ನು ಸಂಪಾದಿಸಿದ ಬಹಳ ವರ್ಷಗಳ ಬಳಿಕ ನಡೆದ ಒಂದು ಘಟನೆಯನ್ನೂ ಹೇಳಿದರು: "ಕುವೆಂಪುರವರ ಗುರುಗಳಾದ ಆರ್. ಕೃಷ್ಣಶಾಸ್ತ್ರಿಯವರು 'ಪ್ರಬುದ್ಧ ಕರ್ನಾಟಕ'ದ ಸಂಪಾದಕರಾಗಿದ್ದ ಕಾಲವದು. ಲೇಖಕ ರೊಬ್ಬರು 'ಭರತೇಶವೈಭವ'ದ ಕುರಿತಾಗಿ ೪-೫ ಲೇಖನಗಳನ್ನು 'ಪ್ರಬುದ್ಧ ಕರ್ನಾಟಕ'ದಲ್ಲಿ ಬರೆದರು. ಆದರೆ ಆದರಲ್ಲಿ ನಾನು ಈ ಕಾವ್ಯವನ್ನು ಸಂಪಾದಿಸಿದ ಕುರಿತಾಗಿ ಒಂದೇ ಒಂದು ಮಾತು ಕೂಡ ಬರೆದಿರಲಿಲ್ಲ. ಬದಲಾಗಿ ರತ್ನಾಕರನ ಊರು ಬೇರಾವುದೋ ಎಂಬ ಕುರಿತಾಗಿ ಮಾತು ಬಂದಿತ್ತು. ಇದನ್ನು ಸರಿಪಡಿಸಲು ಕೃಷ್ಣ ಶಾಸ್ತ್ರಿಗಳು ನನಗೊಂದು ಲೇಖನ ಬರೆಯಲು ಕೇಳಿಕೊಂಡರು. ಮೂಡಬಿದಿರೆಯ ಕುರಿತಾಗಿ ನಾನು ಬರೆದುದು ಹಾಗೆ"

ಈ ಲೇಖನದ ಒಂದು ಭಾಗವನ್ನಷ್ಟೇ ಇಲ್ಲಿ ಉದ್ಧರಿಸಿದ್ದೇನೆ. ಆದು ಉಗ್ರಾಣರ ಸಂಶೋಧನಾತ್ಮಕ ದೃಷ್ಟಿಯ ಬಗೆಗೆ ಬೆಳಕು ಚೆಲ್ಲುತ್ತದೆ:

"ಈ ವೇಣುಪುರವೇ ಮೂಡಬಿದಿರೆ ಎಂಬುದು ಹೇಗೆ? ಮೂಡಬಿದಿರೆಯನ್ನು ಅಲ್ಲಿ ದೊರಕುವ ಶಾಸನಗಳಲ್ಲೆಲ್ಲಾ ವೇಣುಪುರವೆಂದೇ ಕರೆದಿರುತ್ತದೆ. ಮೂಡಬಿದಿರೆಯ 'ಸಾವಿರ ಕಂಬದ ಬಸದಿ', 'ಹೊಸ ಬಸದಿ' 'ತ್ರಿಭುವನ ಚೂಡಾಮಣಿ' – ಎಂದು ಕರೆಯಲ್ಪಡುವ ಬಸದಿಯ ಒಂದು ಶಾಸನದಲ್ಲಿ 'ಶಕನೃಪ ಕಾಲ' ೧೩೫೧ನೆಯ ಸೌಮ್ಯ ಸಂವತ್ಸರದ ಮಾಘ ಶುದ್ಧ ಪಂಚಮಿ ಗುರುವಾರದಲ್ಲಿ ತ್ರಿಭುವನ ಚೂಡಾಮಣಿಯೆಂಬ ಮಹಾಚೈತ್ಯಾ ಲಯಮಂ ಪ್ರಾರಂಭಿಸಿ......ವೇಣುಪುರದ ಎಂಟು ಪ್ರಜೆ ಸೆಟ್ಟಿ ಗಾರರು......ದೇವರಾಯ ಮಹಾರಾಯರ ನಿರೂಪದಿಂ ಅಭಿ ನವ ಚಾರುಕೀರ್ತಿಪಂಡಿತದೇವರುಗಳಿಗೆ ನಿರ್ಮಾಣಾರ್ಥವಾಗಿ ಕೋಟೇಶ್ವರದಲ್ಲಿ ಶಾಲಿಕೆನಾಡು ಚವುಟರು ಮುಖ್ಯವಾದ ಅರು

ವದು ಬಲ್ಲಾಳುಗಳ ಸಹಾಯದಿಂ ತ್ರಿಭುವನಚೂಡಾಮಣಿ ಎಂಬ ಮಹಾಚೈತ್ಯಾಲಯಮಂ ಜಗದಾಶ್ಚರ್ಯಮಪ್ಪಂತು ಮಾಡಿಸಿದರ್' ಎಂದೂ,

"ಇನ್ನೊಂದು ಶಾಸನದಲ್ಲಿ '......ಆ ಮೂಡಬಿದಿರೆಯ ಹಲರು ತ್ರಿಭುವನ ಚೂಡಾಮಣಿ ಚೈತ್ಯಾಲಯಕ್ಕೆ ಶ್ರೀ ಚಂದ್ರ ಪ್ರಭತೀರ್ಥೇಶ್ವರರ ಪರವೋದಾರಿತ ದಿವ್ಯ ಮೂರ್ತಿಯಂ...... ನಿರ್ಮಲಿಸಿದರ್' ಎಂದು ಇದೆ. ಮೂಡಬಿದಿರೆ, ವೇಣುಪುರ– ಈ ಎರಡು ಹೆಸರುಗಳು ಸಮಾನವಾಗಿ ಬಳಕೆಯಲ್ಲಿದ್ದುವು. ಬೇರೊಂದು ಶಾಸನದಲ್ಲಿರುವ

"ಪುರುಹೂತೋರುಪುರಾಭವೇಣಿಪುರದೊಳ್ ಭವ್ಯರ್ ಪಲರ್ ಮಾಡಿಸಲ್ ।
ವರಚಂದ್ರಪ್ರಭಗೇಹಮಂ ತ್ರಿಭುವನೀ ಚೂಡಾಮಣೀ ಖ್ಯಾತಮಂ ।
ಭರದಿಂ ಮಾಡಿಸಿದಂ ತೃತೀಯ ನಿಲಯಕ್ಕಾ ಚೈತ್ಯಗೇಹಾಗ್ರದೊಳ್ ।
ಕರಚೆಲ್ವಾಗಿರೆ ತಾಮ್ರದಿಂ ಪೊದಕೆಯಂ ಶ್ರೀ ಭೈರವಾಕ್ಷ್ಮಾವರಂ ॥

"ಎಂಬ ವೃತ್ತದಲ್ಲಿ ಮೂಡಬಿದಿರೆಯನ್ನು ವೇಣುಪುರವೆಂದೇ ಕರೆದಿರುತ್ತದೆ. ಇದೆಲ್ಲ ಸರಿಯೆ; ಆದರೂ ವೇಣುಪುರವೆಂಬುದು ವೇಣೂರು ಏತಕ್ಕಾಗಬಾರದು? ಎಂಬ ಸಂಶಯವು ಕೆಲವರಿಗೆ ಬರಬಹುದು. ಆದರೆ ವೇಣೂರು ಎಂದು ಈಗ ಕರೆಯಲ್ಪಡುವ ಅಜಿಲರ ರಾಜಧಾನಿಯಾದ, ಗೋಮಟೇಶ್ವರನ ಪ್ರತಿಮೆಯೊಂದಿದ್ದು ಪ್ರಸಿದ್ಧವಾಗಿರುವ, ಊರಿನ ಹೆಸರು ನಿಜವಾಗಿ ಏಣೂರು; ವೇಣೂರು ಅಲ್ಲ. ಇಲ್ಲಿ ಎರಡೂರು, ಮೂರೂರು, ನಾಕೂರು,

ಐದೂರು, ಆರೂರು, ಏಣೂರು, ಎಣ್ಮೂರು ಎಂಬ ಗ್ರಾಮ ಗಳಿವೆ.

“ಆದಪ್ರಯುಕ್ತ ಭರತೇಶ್ವರ ವೈಭವದ ಕರ್ತೃವು ಹೇಳುವ ವೇಣುಪುರವು ಮೂಡಬಿದಿರೆಯೇ ಹೊರತು (ವೇಣೂರು) ಏಣೂರು ಅಲ್ಲ. ಈ ಭಾಗದಲ್ಲಿ ದೇವಚಂದ್ರನ ಹೇಳಿಕೆಯನ್ನು ನಂಬಬಹುದು.’’ *

ಉಗ್ರಾಣರು ಬರೆದ ಇನ್ನೊಂದು ವಿಚಾರಾತ್ಮಕ ಲೇಖನ ‘ಕನ್ನಡ ಭಾರತದ ಕಥಾನಾಯಕನಾರು?’ ಕರ್ಣ, ಧರ್ಮರಾಜ, ಭೀಮ, ಪಾರ್ಥ, ದುರ್ಯೋಧನ, ಭೀಷ್ಮ ಇವರೆಲ್ಲರನ್ನು ವಿಮರ್ಶಿಸಿ, ಕುಮಾರವ್ಯಾಸನ ಭಾರತದ ನಾಯಕನು ಶ್ರೀಕೃಷ್ಣನೇ ಎಂದು ಉಗ್ರಾಣರು ಸಾಧಾರಪೂರ್ವಕ ಸಿದ್ಧಪಡಿಸಿದ್ದಾರೆ.

ಸಂಶೋಧನಾತ್ಮಕ ಲೇಖನಗಳಲ್ಲದೆ ಉಗ್ರಾಣರು ಚಿಕ್ಕ ಚಿಕ್ಕ ಪ್ರಹಸನಗಳನ್ನೂ ಕಥೆಗಳನ್ನೂ ಬರೆದಿದ್ದಾರೆ. ‘ಲೋಭಿಪ್ರಹಸನ’ ಎಂಬುದು ಅವರದೊಂದು ಚಿಕ್ಕ ನಾಟಕ – ಮಕ್ಕಳಿಗಾಗಿ ಬರೆದುದು. ‘ಚಿಕ್ಕಪ್ಪನ ಚಿಕ್ಕ ಕಥೆಗಳು’ ಎಂಬ ಶೀರ್ಷಿಕೆಯಲ್ಲಿ ಅವರ ಅನೇಕ ಆರಂಭಿಕ ಕಥೆಗಳು ‘ಕರ್ನಾಟಕ ಕೇಸರಿ’ಯಲ್ಲಿ ಪ್ರಕಟವಾದುವು. ‘ಧರ್ಮಾಮೃತ’ ಎಂಬ ಹಳೆಗನ್ನಡದ ಚಂಪೂಕಾವ್ಯದ ಆಧಾರದಿಂದ ‘ಸವಣರು ಮರುಳರಲ್ಲ’, ‘ಕುರುಡನಿಗೆ ಕಣ್ಣು ಬರುವುದೆ?’, ‘ಕಾಮರೂಪ’ ಮೊದಲಾದುವು ಇವರು ಬರೆದ ಬೇರೆ ಕೆಲವು ಕಥೆಗಳು.

‘ಆಂಧ್ರಕುಲದ ರಾಮರಾಜ’ ಎಂಬುದು ಅವರ ಹೆಸರಾಂತ ಪ್ರಬಂಧ. ಅಲೆಕ್ಸಾಂಡರ್ ಡೂಮಾಸನ ಹೆಸರಾಂತ “ಡಾನ್ ಕ್ವಿಕ್ಸೊ”ವನ್ನು ಉಗ್ರಾಣರು ಕನ್ನಡಕ್ಕೆ ಅನುವಾದಿಸಿದರು. ಅದನ್ನು ಮೆಕ್‌ಮಿಲನ್ ಪ್ರಕಾಶಕರು ಪ್ರಕಟಪಡಿಸಿದಾಗ ಇಂಗ್ಲಾಂಡಿನ

---

* ಪ್ರಬುದ್ಧ ಕರ್ನಾಟಕ—ವಿಕ್ರಮ ಸಂವತ್ಸರ, ಸಂಕ್ರಾಂತಿ ಸಂಚಿಕೆ.

ಪ್ರಧಾನಿ ಮೆಕ್ಮಿಲನರಾಗಿದ್ದರಂತೆ. ಈ ಕನ್ನಡ ಅನುವಾದದ ಮೂರು ಕೈಬರಹದ ಪ್ರತಿಗಳು ಇಂದಿಗೂ ಬ್ರಿಟಿಷ್ ಮ್ಯೂಸಿಯುಮ್‌ನಲ್ಲಿವೆ.

## ಭರತೇಶವೈಭವ

ಉಗ್ರಾಣರ ಸಾಹಿತ್ಯ ಸಾಧನೆಗಳಲ್ಲೆಲ್ಲ ಎದ್ದು ಕಾಣುವಂಥದ್ದು ಮಹಾಕವಿ ರತ್ನಾಕರವರ್ಣಿಯ 'ಭರತೇಶ ವೈಭವ'ದ ಪರಿಶೋಧನೆ ಮತ್ತು ಸಂಪಾದನೆ. ಬಹುಶಃ ಅವರು ಈ ಕೆಲಸ ಮಾಡುವ ತನಕ ಕನ್ನಡ ನಾಡಿಗೆ ರತ್ನಾಕರವರ್ಣಿಯ ಯೋಗ್ಯತೆಯೇ ತಿಳಿದಿರಲಿಲ್ಲ – ಎಂದರೆ ತಪ್ಪಾಗದು. ಭಾಮಿನಿಷಟ್ಪದಿಗೆ ಕುಮಾರವ್ಯಾಸನು, ರಗಳೆಗಳಿಗೆ ಹರಿಹರನು ಇರುವಂತೆಯೇ ಸಾಂಗತ್ಯಕ್ಕೆ ರತ್ನಾಕರನು ಸಾಮ್ರಾಟನು ಎಂದು ಉಗ್ರಾಣರು ಮೊತ್ತ ಮೊದಲಾಗಿ ಸ್ಪಷ್ಟವಾಗಿ ತೋರಿಸಿಕೊಟ್ಟರು. 'ಭರತೇಶವೈಭವ'ದ ಮೊದಲ ಭಾಗ – ಭೋಗವಿಜಯ ಪ್ರಕಟವಾದೊಡನೆ ಡಿ.ವಿ.ಜಿ.ಯವರು ಬರೆದ ಒಂದು ಪತ್ರವೇ ಇದಕ್ಕೆ ಸಾಕ್ಷಿ –

"Entire kannada country will, I have no doubt, be very thankful to you for having brought out this ancient work in such a neat and presentable style"

ಹದಿನೈದನೆಯ ಶತಮಾನದ ಈ ಕವಿ–ಕಾವ್ಯ, ವಸ್ತು ಮತ್ತು ದರ್ಶನದ ದೃಷ್ಟಿಯಿಂದ ಭಾರತದ ಮಹಾಕವಿಗಳ ಸಾಲಿಗೆ ಸೇರುತ್ತಾನೆ. ತ್ಯಾಗ–ಭೋಗಗಳ ಸಮನ್ವಯದ ಯೋಗದರ್ಶನದ ಸುಂದರ ಚಿತ್ರಣವಿರುವ ಇಂಥ ಕಾವ್ಯ ಸೃಷ್ಟಿ ಜಗತ್ತಿನ ಮತ್ತಾವ ಸಾಹಿತ್ಯದಲ್ಲೂ ಆಗಿಲ್ಲವೆಂದೇ ಇದು ಜಗತ್ಕೃತಿ. ರತ್ನಾಕರಸಿದ್ಧ, ರತ್ನಾಕರವರ್ಣಿ, ರತ್ನಾಕರ ಅಣ್ಣ ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟ ಈ ಕವಿಯು ಬರೆದ 'ಭರತೇಶವೈಭವ'ದ ಬೇರೆ

ಬೇರೆ ಎಂಟು ಓಲೆಪ್ರತಿಗಳನ್ನು ಉಗ್ರಾಣರು ಪರಿಶೀಲಿಸಿ, ಸಂಪಾದಿಸಿದರು. ಈ ಸಂಶೋಧನಾ ಕಾರ್ಯವನ್ನವರು ೧೯೧೮ರಿಂದ ೨೧ರ ತನಕವೂ ಮಾಡಿ, ಅವುಗಳನ್ನು ಮೂರು ಭಾಗಗಳಲ್ಲಿ ಪುತ್ತೂರಿನ ಜೈನ ಯುವಕ ಸಂಘದವರು ೧೯೨೩–೨೫ರಲ್ಲಿ ಪ್ರಕಟಿಸಿದರು. ಇದರ ಪುನರ್ಮುದ್ರಣವನ್ನು ೧೯೪೮ರಲ್ಲಿ 'ವಿವೇಕಾಭ್ಯುದಯ'ದವರು ಮಾಡಿದರು.

ಎಪ್ಪತ್ತೆಂಟರ ವಯಸ್ಸಿನಲ್ಲೂ ಉಗ್ರಾಣರಿಗೆ 'ಭರತೇಶ ವೈಭವ'ದ ಅನೇಕ ಪದ್ಯಗಳು ಬಾಯಿಪಾಠ ಇವೆ. ರತ್ನಾಕರ ವರ್ಣಿಯ ಶೃಂಗಾರವನ್ನು, ಸೌಂದರ್ಯವರ್ಣನೆಯನ್ನು ಮಾಡುವ ಪದ್ಯಗಳನ್ನು ಉತ್ಸಾಹದಿಂದ ಹಾಡಿ ತೋರಿಸಿ, ಅವರು ವಿವರಿಸಲಾರಂಭಿಸಿದರು :

"ರತ್ನಾಕರನು ಬರೆದ ಅನೇಕ ಪದ್ಯಗಳಲ್ಲಿ ದೇವರನ್ನು ಒಲಿಸಿಕೊಳ್ಳುವ ರೀತಿ, ಆಣೆ-ಭಾಷೆ ಹಾಕಿ ಅವನನ್ನು ತನ್ನವನನ್ನಾಗಿ ಮಾಡಿಕೊಳ್ಳುವ ಬಗೆಗಳು ತುಂಬ ಸುಂದರ. ಉದಾಹರಣೆಗೆ ಕೆಲವು ಪದ್ಯಗಳು ಹೀಗಿವೆ; ಕೇಳು –

"ನೋಡಿ ನೋಡದ ನುಡಿದಾಡಿ ನುಡಿಯದೆಡೆ ।
ಯಾಡಿ ನಡೆಯದ ಮಹಾತ್ಮಾ ॥
ಕೂಡೆ ಕೂಡೆನಗೆ ಚಿತ್ಕಳೆಯ ಬೆಳಕನುಂಟು ।
ಮಾಡು ನಿರಂಜನ ಸಿದ್ಧಾ ॥

ನಿಂದಲ್ಲಿ ನಡೆದಲ್ಲಿ ಕುಳಿತಲ್ಲಿ ಸರ್ವತ್ರ ।
ಕುಂದದೆ ಕುಶಲಲೀಲೆಯೊಳು ॥
ಸಂದಿಸುವ ಭವನನ್ನೆದೆಯೊಳಗಿರುಚಿದಾ ।
ನಂದ ಚಿದಂಬರಪುರುಷಾ ॥

ತಿಳಿವೆಳಗಿನ ತೀರ್ಥರೂಪವೆ ತಿಂಗಳ ।
ಬೆಳಗಿನೊಳಾದ ಪುತ್ಥಳಿಯೆ ॥

ಕಳುಮಾಡದೆನಗೆ ಸನ್ಮತಿದೋರು ಸುಜ್ಞಾನ ।
ನಿಳಯು ನಿರಂಜನ ಸಿದ್ಧಾ ॥

ಹಿಂದುಮುಂದೆಡಬಲ ಹೊರಗೊಳಗಡಿಕಡೆ ।
ಯೆಂದೆನ್ನದಮೃತ ಸ್ವರೂಪಾ ॥
ಎಂದೆಂದು ಯೆನ್ನ ಚಿತ್ತದೊಳಿರು ಸಚ್ಚಿದಾ ।
ನಂದ ಚಿದಂಬರ ಪುರುಷಾ ॥

ಕಾಣದರ್ಥವ ಕಾಣಿಸುವ ಪರಂಜ್ಯೋತಿ ನೀ ।
ಮಾಣದೆ ನನ್ನೆದೆಯೆಂಬ ॥
ಕೋಣೆಯೊಳಿರು ಹೊದೆಯಾದರೆ ನಿನಗೆ ನಿ ।
ನ್ನಾಣೆ ಚಿದಂಬರಪುರುಷಾ ॥

"ಈ ರೀತಿಯ ಆತ್ಮೀತೆಯು ಟಾಗೋರರ 'ಗೀತಾಂಜಲಿ'ಯ ವರ್ಣನೆಗಳನ್ನು ನೆನಪಿಗೆ ತರುತ್ತದೆ. ಇದನ್ನು ಕೇಳಿದ ಮಿತ್ರರೊಬ್ಬರು ಟಾಗೋರರ ಗೌರವಕ್ಕೆ ಈ ಮಾತು ಕಡಿಮೆ ಆಯಿತೆಂಬ ಅರ್ಥದಲ್ಲಿ ಈ ರೀತಿಯ ಹೋಲಿಕೆ ಸರಿಯಲ್ಲ ಎಂದು ನನ್ನನ್ನೇ ಆರೋಪಿಸಿದರು. ಅವರೊಡನೆ ನಾನು ಹೇಳಿದೆ: 'ನಿಮ್ಮ ಮಾತನ್ನು ನಾನು ಒಪ್ಪಿದೆ. ರತ್ನಾಕರವರ್ಣಿಯನ್ನು ಟಾಗೋರರೊಡನೆ ಹೋಲಿಸಿ ನಾನು ದೊಡ್ಡ ತಪ್ಪು ಮಾಡಿದೆ. ಏಕೆಂದರೆ ರತ್ನಾಕರ ವರ್ಣಿಯು ಐದು ಶತಮಾನಗಳ ಹಿಂದಿನವನು; ಟಾಗೋರರು ನಮ್ಮ ಸಮಕಾಲೀನರು. ಆದುದರಿಂದ ಟಾಗೋರರ ಕೆಲವು ಭಾವನೆಗಳು ರತ್ನಾಕರವರ್ಣಿ ಬರೆದಂತೆಯೇ ಇವೆ ಎಂಬುದು ಸರಿತಾನೆ?" ಎಂದೆ. ರತ್ನಾಕರನ ಉದಾತ್ತವಾದ ಸಾಕ್ಷಾತ್ಕಾರದ ಭಾವಗಳು 'ಗೀತಾಂಜಲಿ'ಯಷ್ಟೇ ದಿವ್ಯವಾಗಿವೆ. ಉದಾಹರಣೆಗೆ,

"ಆರು ಬಲ್ಲರು ಹಂಸ ತತ್ವವ ತಮ್ಮ ಶ ।
ರೀರ ತುಂಬಿರುತಿಹುದದನು ॥
ಹಾರದೆ ಸಾರದೆ ಹೊರ ಹೊರಗಾಡಿ ಸಂ ।
ಸಾರ ದುಃಖವನುಣುತಿಹರು ॥

ಹೊಳೆವ ಕನ್ನಡಿ ಕೈಯೊಳಿರ್ದು ನೋಡದೆ ನೀರ ।
ನೆಳಲಲ್ಲಿ ಮೊಗವ ನೋಳ್ಪಂತೆ ॥
ಒಳಗಿದ್ದ ಚಿದ್ರೂಪ ನೋಡದೆ ಜಗವೆಲ್ಲ ।
ಬಳಲುತಿಹುದು ಹೊರಗಾಡಿ ॥

ಒರೆಯೊಳಿದ್ದಾಯುಧದಂತೆ ಕಾರ್ಮುಗಿಲಿನ ।
ಮರೆಯೊಳಗಿನ ಸೂರ್ಯನಂತೆ ॥
ಹೊರಗೆ ಕಲ್ಮಷದ ಮೈಯಹುದೊಳಗಾತ್ಮನು ।
ಕರೆವುತಿಹನು ತಿಳಿವೆಳಗಾ ॥

ಆಗಮ ಕಾವ್ಯ ನಾಟಕದೊಳೆಲ್ಲರ ತಲೆ ।
ದೂಗಿಸಿ ಮಲಗಿಸಬಹುದು ॥
ಮೂಗರು ಕಂಡ ಕನಸಿನಂತೆ ಮೆರೆವಾತ್ಮ ।
ಯೋಗವನಾರಾಡಬಹುದು ॥

"ಅವನ ಶೈಲಿ ಎಷ್ಟು ಸರಳ. ಸಾಂಗತ್ಯವು ಒಂದು ಹಾಡಿನ ಮಟ್ಟಾಗಿದ್ದು ಅದಕ್ಕೆ ತಾಳವೇ ಮುಖ್ಯವಾಗಿ, ಮಾತ್ರೆಗಳ ತೊಡಕೇ ಇಲ್ಲವಾದುದರಿಂದ ನೀರು ಹರಿಯುವಂತೆಯೂ ತಂಗಾಳಿಯು ತೀಡುವಂತೆಯೂ ತಡೆಯಿಲ್ಲದೆ ಬರೆಯುವುದಕ್ಕೆ ಅನುಕೂಲವಾಗಿ ಪರಿಣಮಿಸಿತು. ಈ ಕವಿಗೆ 'ಜಗದೊಳ್ ಸನ್ನಿಮಾದ ನಾಳ್ನುಡಿಗಳಂ ಛಂದಕ್ಕೆ ಬರ್ಪಂತೆ ನೆಟ್ಟಗೆ ಮಾತಾಡುವ ಬಲ್ಮೆ ಚಿತ್ತದೊಳೊರಲ್ದರ್ದರ್ಥಮಂ ಕೂಡೆ ನಾಲಗೆಯಿಂ ರಂಜಿಸುವೊಂದು ಬಿನ್ನಣವು' ಇದೆ. ತನ್ನ ಹೃದಯದ ಭಾವನೆಗಳನ್ನೂ ವಾಚಕರ ಹೃದಯಕ್ಕೆ

ಮುಟ್ಟಿಸುವಾಗ ಎಂಥ ದೊಡ್ಡ ಭಾವನೆಯನ್ನೂ ಸರಳವಾಗಿ ನೇರವಾಗಿ ಕೆಲವೇ ಪದಗಳಲ್ಲಿ ಹೇಳುವ ಸಾಮರ್ಥ್ಯವಿದೆ ಎಂದೇ

"ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗರು ।
ರಯ್ಯಾಮಂಚಿದಿಯೇನೆ ತೆಲುಗಾ ॥
ಅಯ್ಯಯ್ಯ ಯೆಂಚ ಪೊರ್ಲಾಂಡೆಂದು ತುಳುವರು
ಮೈಯುಬ್ಬಿ ಕೇಳಬೇಕಣ್ಣ ॥

"ಎಂದು ಅಲ್ಪಸ್ವಲ್ಪ ಕನ್ನಡ ತಿಳಿದವರೂ ಈ ಕಾವ್ಯವನ್ನು ಓದಬಹುದಾಗಿದೆ."

ಅನಂತರ ಉಗ್ರಾಣರು ಕಾಳಿದಾಸ – ರತ್ನಾಕರವರ್ಣಿಯ ತುಲನೆ ಮಾಡಿ ಕೆಲವು ಪದ್ಯಗಳನ್ನು ಹಾಡಿದರು. "ರತ್ನಾಕರನ ಪ್ರಭಾತ ವರ್ಣನೆ ಬಹುಶಃ ಕಾಳಿದಾಸನ ಚಿತ್ರಣದ ಛಾಯೆಯಂತಿದೆ. ಶಯ್ಯಾಗೃಹದಲ್ಲಿ ಮಲಗಿದ ಭರತೇಶನನ್ನು ಎಚ್ಚರಗೊಳಿಸುವ ರತ್ನಾಕರನ ಉಪ್ಪವಡ ಹಾಡೂ ಇಂದುಮತಿಯ ಸ್ವಯಂವರಕ್ಕೆ ಹೋದ ಅಜನೃಪನನ್ನು ಮುಂಜಾನೆ ಜಾಗರಗೊಳಿಸುವ ಪ್ರಭಾತ ಗೀತವೂ ಕವಿತಾ ಚಾತುರ್ಯದಲ್ಲಿ ಸಮತೂಕವಾಗಿವೆ. ಕಾಳಿದಾಸನ ವರ್ಣನೆಯ ಛಾಯೆಯನ್ನು ಕವಿಯು ಹೃದಯದೊಳಗಿಟ್ಟುಕೊಂಡು ಬರೆದರೂ ರತ್ನಾಕರನ ಹಾಡಿನಲ್ಲಿ ಭಾವನಾ ಸ್ವಾತಂತ್ರ್ಯವು ಪ್ರತ್ಯೇಕವಾಗಿ ಕಾಣುವುದು." ಹೀಗೆಂದು ಉಗ್ರಾಣರು ಈ ಪದ್ಯಗಳನ್ನು ಹಾಡಿ ತೋರಿಸಿದರು.

ಅರುಹನ ನೆನಹಿಂದ ಪಾಪ ತೊಲಗುವಂತೆ
ಧರೆಯಂಧಕಾರ ಜಾರುತಿದೆ ॥

ಗುರುಭಕ್ತಿ ತೋರುವಂತರುಕೋದಯ ತೋರಿ
ತರಸಯೆಂದೆತ್ತಿ ಹಾಡಿದರು ॥

ತಾರೆ ಮುಸಳುತಿವೆ ತಣ್ಣತಣ್ಣನೆ ಮಂದ ।
ಮಾರುತ ಬಂದು ತೀಡುತಿದೆ ॥

ನಾರಿಯ ನಳಿತೋಳ ತೆಕ್ಕೆಯಿಂದೇಳಿಲೆ
ವೈರಿಭೂಭೂಜತಮೋಭಾನು ॥
ಅರುಣೋದಯುವಾಗಿ ಕಿರಣೋದಯುವಾಯ್ತು ।
ತರಣಿ ತೋರದ ಮುನ್ನ ನಿನ್ನ ॥
ಸುರುಚಿರಾಂಗವ ತೋರಿ ಜಗವನುದ್ಧರಿಸೆಲೆ ।
ಪುರುನಾಥನಗ್ರಕುಮಾರಾ ॥

"ರತ್ನಾಕರನ ಕೆಲವು ವಿವರಣೆಗಳು – ಮುಖ್ಯವಾಗಿ ಶೃಂಗಾರ, ಸೌಂದರ್ಯದ ಬಗೆಗೆ ಅವನು ಬರೆದುದು ಇಂಗ್ಲೀಷಿನ ಶೆಲ್ಲಿ ಕವಿಯ ನೆನಪನ್ನೂ ತರುತ್ತದೆ.

"One word is too often profaned
For me to profane it;
One feeling too falsely desdained
For thee to desdain it

"ಎಂದು ಶೆಲ್ಲಿ ಮಹಾಕವಿ ಪ್ರೇಮದ ಬಗೆಗೆ ಹೇಳಿದಂತೆ 'ಆಸ್ಥಾನ ಸಂಧಿ'ಯಲ್ಲಿ

"ಹೆಂಗಳ ರೂಪು ಗಂಡರಿಗೆ ಗಂಡರ ರೂಪು ।
ಹೆಂಗಳ ಸೋಲಿಪುದೆಂಬ ॥
ಪಾಂಗಲ್ಲವವನ ಚೆಲ್ವಿಕೆ ಗಂಡು ಪೆಂಗಳ ।
ಕಂಗಳ ಸೆರೆವಿಡಿದಿಹುದು ॥
ನಿಟ್ಟಿಸಿದರೆ ಮುತ್ತ ಮುದುಕಿಗಾದರು ಜುಮ್ಮು ।
ದಟ್ಟಿಸುತಿಹುದು ರೂಪವನ ॥
ಬಟ್ಟ ಜವ್ವನೆಯರಂತಿಂತಾದರೆಂದು ಬಾ ।
ಯ್ಬಿಟ್ಟಿನ್ನು ನುಡಿಯಲದೇಕೆ ॥

"ಮುಂದೆ ಕುಸುಮಾಜಿಯಿಂದ ಆತನನ್ನು ವರ್ಣಶಾಸ್ತ್ರಕ್ಕನುಸಾರ ವಾಗಿ ಶಿಖದಿಂದ ನಖದ ವರೆಗೆ ಬಣ್ಣಿಸುವಾಗಲೂ ಚರ್ವಿತ

ಚರ್ವಣಗಳಾಗಿರುವ ಮಾತುಗಳನ್ನು ದೂರವಿಟ್ಟು ಅನೇಕ ಹೊಸ ಭಾವನೆಗಳನ್ನು ಉಪಯೋಗಿಸಿ ಉತ್ಪ್ರೇಕ್ಷೆಯ ಚಮತ್ಕಾರದಲ್ಲಿ, ಹೇತ್ವಲಂಕಾರ, ಭ್ರಮಾಲಂಕಾರಗಳಲ್ಲೂ ಬಣ್ಣಿಸಿ ವಾಚಕರನ್ನು ಹೊಸ ಲೋಕಕ್ಕೇ ಕೊಂಡೊಯ್ಯುತ್ತಾನೆ.

"ರತ್ನಾಕರನ ಶೃಂಗಾರವರ್ಣನೆಯ ಬಗೆಗೆ ಒಂದು ಮಾತು. ಬಹುಶಃ ಅವನ ಕಾವ್ಯಗಳಲ್ಲಿ ಕಾಣುವ ಈ ಧ್ವನಿಯು ಬೇರಾವ ಜೈನ ಕವಿಗಳಲ್ಲೂ ಇಲ್ಲವೆನ್ನಬಹುದು. ಈ ಜೀವನ ಕ್ಷಣಭಂಗುರ ಎಂಬ ಜೈನವಾದವನ್ನು ರತ್ನಾಕರ ಪೂರ್ಣವಾಗಿ ಒಪ್ಪಿಲ್ಲ. ಕ್ಷಣಿಕ ವಾದರೂ ಜೀವನ, ಭೋಗಕ್ಕೆ ಅಯೋಗ್ಯವಲ್ಲ ಎಂಬುದು ಅವನ ವಾದ. ಅದನ್ನು ಕ್ಷಣಿಕ ಎಂದು ತಿಳಿದೂ ಭೋಗವಿಮುಖನಾಗ ದೆಯೇ ಶಾಶ್ವತಸುಖವನ್ನು ಅರಸಿ ಹೋಗಬೇಕೆಂಬುದೇ ಅವನ ಸಂದೇಶ.

"ಭೋಗವಿಲ್ಲದೆ ಭೋಗಿಯಹುದು ನಿನ್ನೊಳಗಾತ್ಮ ।
ಯೋಗವಿಲ್ಲದೆ ಯೋಗಿಯಹುದು ॥
ಭೋಗದೊಳಿದ್ದು ಯೋಗವ ಮಾಡಿ ಭವಮುಕ್ತ ।
ರಾಗುವರಾರು ನಿನ್ನಂತೆ ॥

..ಎಂಬಲ್ಲಿ ಅದು ಸ್ಪಷ್ಟ. 'ಭೋಗಿಯೋಗಿಗಳೆದೆ ಜುಮ್ಮುಜುಮ್ಮೆನೆ ನೇಮದಾಗಿ ಸೊಲ್ಲಿ'ಸುವೆ ಎಂದು ವಚನ ಕೊಟ್ಟು, ಅಧ್ಯಾತ್ಮ ವಿಚಾರದಲ್ಲಿ ಕೂಪಮಂಡೂಕದಂತಿರದೆ ಮಾನಸಸರೋವರದ ಹಂಸದಂತೆ ಇದ್ದಾನೆ. ರತ್ನಾಕರನ ವಿಸ್ತಾರವಾದ ಲೋಕಾನುಭವ ಕನ್ನಡ ಸಾಹಿತ್ಯದಲ್ಲೇ ಅಪೂರ್ವವಾದುದು. ಅವನ ಒಂದೊಂದು ಸಂಧಿಯೂ ಅನುಭವದ ಗನಿ. ತಾನು ಬರೆದುದಲ್ಲಿ ಹೆಚ್ಚುಕಡಿಮೆ ಇದ್ದರೆ ಅದರಿಂದ ಧರ್ಮಕ್ಕೆ ಏನೂ ಕಳಂಕವಿಲ್ಲ ಎಂದೂ ಹೇಳಿ ಕೊಂಡಿದ್ದಾನೆ. ಜೈನನಾದ ಈ ಕವಿ ಮುಂದೆ ಲಿಂಗವಂತನಾದರೂ ಕೊನೆಗೆ ಜೈನನಾಗಿಯೇ ಕೊನೆಗಂಡನು ಎಂಬ ಅವನ ಜೀವನ

ವೃತ್ತಾಂತಕ್ಕೂ ಇದು ಹೊಂದುತ್ತದೆ. ಚೆಲುವೆ ಪತಿವ್ರತೆಯಾದರೆ ಅದೊಂದು ಅಪೂರ್ವವೇ ಸರಿ. ಅಂಥಾಕೆ ಗುರುವಿಗೆ ನಮಸ್ಕರಿಸುವಾಗ ಆತನೇ ಆಕೆಯನ್ನು ಕಾಮಿಸಿದರೆ ಅದರಿಂದ ಧರ್ಮ ಉಳಿದೀತೆ?

"ಸಕಲ ಲಕ್ಷಣವು ವಸ್ತುಕತೆ, ವರ್ಣಕಕಿಷ್ಟು ।
ವಿಕಳವಾದರು ದೋಷವಿಲ್ಲ ॥
ಸಕಲ ಲಕ್ಷಣಕಾಗಿ ಬಿರಸು ಮಾಡಿದರೆ ಪು
ಸ್ತಕದ ಬದನೆಕಾಯಹುದು ॥

ಚಂದಿರನೊಳಗೆ ಕಪ್ಪುಂಟು ಬೆಳ್ದಿಂಗಳು ।
ಕಂದಿ ಕುಂದಿಹುದೋ ನಿರ್ಮಲವೊ ॥
ಸಂಧಿಸಿ ಶಬ್ದದೋಷಗಳೊಮ್ಮೆ ಸುಕಥೆಗೆ ।
ಬಂದರೆ ಧರ್ಮ ಮಾಸುವುದೇ ॥

"ಎಂದು ಆರಂಭದಲ್ಲೇ ದೃಷ್ಟಾಂತಾಲಂಕಾರದಲ್ಲಿ ಹೇಳಿದ ಬಗ್ಗೆ ಎಷ್ಟು ಸುಂದರ! ಅವನ ಕಾವ್ಯರಚನೆಯ ಉದ್ದೇಶ ಲೋಕಸುಖ –

"ಶೃಂಗಾರಕಾಗಿ ಕಷ್ಟದ ಕಥೆಗೇಳ್ದು ಜ ।
ನಂಗಳು ಕೆಡಬೇಡವೆಂದು ॥
ಅಂಗಸುಖಿಯ ಮೋಕ್ಷಸುಖಿಯು ಕಾವ್ಯವನಿಷ್ಟು ।
ಶೃಂಗಾರ ಕಟ್ಟಿ ಪೇಳಿದೆನು ॥

"ಎಂದಿದ್ದಾನೆ 'ಶೃಂಗಾರಕವಿ ಹಂಸರಾಜ' ಎಂಬ ಬಿರುದು ಹೊತ್ತ ಈ ಕವಿ. ಹೀಗೆ ಪ್ರತಿ ಸಂಧಿಯೂ ಸುಗಂಧಿಯಾಗಿ ಪರಿಮಳ ಬೀರಿ ಕೊನೆಗೊಂಡಿದೆ."

ಮುಂದೆ ಉಗ್ರಾಣರು ಹೇಳಿದುದು ರತ್ನಾಕರನ ಭಾರೀ ಚರ್ಚಾಸ್ಪದವಾದ 'ಸ್ತ್ರೀರತ್ನಸಂಭೋಗ ಸಂಧಿ'ಯ ಕುರಿತು.

"ಮೂರು–ನಾಲ್ಕು ವರ್ಷಗಳ ಸಂಶೋಧನೆ ಮುಗಿಸಿ, ಎಂಟು ಬೇರೆ ಬೇರೆ ಓಲೆ ಪ್ರತಿಗಳನ್ನು ನೋಡಿ ಪರಿಷ್ಕರಣ ಕೆಲಸ ಮಾಡಿದು

ದಾಯಿತು. ಪ್ರಕಾಶನದ ಹೊಣೆಯನ್ನು ಪುತ್ತೂರಿನ ಜೈನ ಯುವಕ ಸಂಘದವರು ಹೊತ್ತರು. ಮುದ್ರಣ ಆರಂಭವಾದೊಡನೆ ದೀರ್ಘ ವಾದ ಒಂದು ಪ್ರಕಟಣೆಯನ್ನು ಹೊರಡಿಸುವುದೆಂದಾಯಿತು. ಪ್ರಥಮ ಭಾಗದೊಂದಿಗೆ ಸೇರಿಸಿ, ಪ್ರಕಟಸಲನುಕೂಲವಾಗು ವಂತೆ ರತ್ನಾಕರನ ಜೀವನ, ಕಾವ್ಯಗಳ ಕುರಿತಾಗಿ ಒಂದು ವಿಸ್ತಾರ ವಾದ ಪೀಠಿಕೆ ಬರೆಯಬೇಕೆಂದು ಹಿರಿಯರಾದ ಪಂಜೆಯವರನ್ನು ಕೇಳಿಕೊಂಡೆವು. ಮೊದಲು ಅವರು ಈ ಕೆಲಸಕ್ಕೆ ಸಂತೋಷದಿಂದ ಒಪ್ಪಿದರೂ 'ಸ್ತ್ರೀರತ್ನಸಂಭೋಗ ಸಂಧಿ'ಯನ್ನು ಇದರಲ್ಲಿ ಸೇರಿ ಸಲು ಆಕ್ಷೇಪವೆತ್ತಿದರು. ಅಷ್ಟುಮಾತ್ರವಲ್ಲದೆ ಅದನ್ನು ಸೇರಿಸು ವುದೇ ಆದರೆ ತಾನು ಪೀಠಿಕೆಯನ್ನು ಬರೆಯುವುದೇ ಇಲ್ಲ ಎಂದು ಗಟ್ಟಿಯಾಗಿ ಕೂತುಬಿಟ್ಟರು. ನನಗಾದರೊ ಒಂದೆಡೆ ಪಂಜೆಯವರ ಕುರಿತಾದ ಗೌರವ. ಹಾಗೆಂದು ರತ್ನಾಕರನ ಕಾವ್ಯಕ್ಕೆ ಅಪಚಾರ ಮಾಡುವುದೆ? ಸಾಹಿತ್ಯದಲ್ಲಿ ಶೀಲ-ಅಶ್ಲೀಲಗಳ ಇಂಥ ಪ್ರಶ್ನೆ ಅಸಂಬದ್ಧ. ಶೇಕ್ಸ್‌ಪಿಯರನ ಕೃತಿಗಳನ್ನು ಪ್ರಕಟಿಸುವಾಗ ಅವ ನ್ನೇನು, ಕಡಿದು ಬೇಕಾದುದನ್ನು ಮಾತ್ರ ಪ್ರಕಟಿಸಲಿಲ್ಲ. ಇದರಿಂದ ಮೂಲ ಕವಿಗೆ ಎಷ್ಟು ಅಪಮಾನ, ಅಪಚಾರ ಮಾಡಿದಂತೆ! ಸಾಹಿತ್ಯ ದಲ್ಲಿ ಇದು ಶೃಂಗಾರ, ಕಲೆ. ಹಾಗೆಂದರೆ ಬೇಲೂರು, ಹಳೆಬೀಡು ಗಳಲ್ಲೆಲ್ಲ ಎಷ್ಟೊಂದು ಅಶ್ಲೀಲ ಕೆತ್ತನೆಗಳಿಲ್ಲ!...... ಈ ಪ್ರಶ್ನೆ ಯನ್ನು ಒಂದು challenge ಎಂಬಂತೆ ತೆಗೆದುಕೊಂಡು ನಾನೇ ಪೀಠಿಕೆಯೇನೋ ಬರೆದೆ. ಆದರೂ ಪಂಜೆಯವರ ಬಗೆಗಿನ ಗೌರವ ದಿಂದ ಈ ಸಂಧಿಯ ಅನೇಕ ಪದ್ಯಗಳನ್ನು ಬಿಟ್ಟುಬಿಟ್ಟೆ. ಹಾಗೆಂದು ಸುಖವುಂಟೆ? ಔಚಿತ್ಯದ ಮೇರೆ ಮೀರಿತೆಂದು ೧೦೦ಕ್ಕೂ ಮೇಲೆ ಪದ್ಯಗಳನ್ನು ಬಿಟ್ಟರೂ ಅನೇಕರು ಟೀಕಿಸಿದರು. ಮುದ್ರಣವಾ ದೊಡನೆ ಮಿತ್ರರಾದ ರಾಜರತ್ನಂರವರಿಗೆ ಒಂದು ಪ್ರತಿ ಕಳಿಸಿ ಕೊಟ್ಟೆ. ಈ ಸಂಧಿಯನ್ನು ಇಡೀಯಾಗಿ ಏಕೆ ಸೇರಿಸಲಿಲ್ಲ? ಎಂದು

ಅವರು ಪ್ರಶ್ನೆ ಕೇಳಿದರು. ಅವರಿಗೆ ಅದೇ ಸಂಧಿ ಪೂರ್ಣವಾಗಿ ಬೇಕಾಗಿತ್ತಂತೆ. ಆಮೇಲೆ ಪುಸ್ತಕದಷ್ಟೇ ದೊಡ್ಡ ಕಾಗದದ ಹಾಳೆ ತೆಗೆದುಕೊಂಡು, ಮುದ್ರಣಾಕ್ಷರಗಳಷ್ಟೇ ಚಿಕ್ಕ ಅಕ್ಷರಗಳಲ್ಲಿ ಆ ಸಂಧಿಯನ್ನು ಪೂರ್ಣವಾಗಿ ಬರೆದು ಅವರಿಗೆ ಕಳಿಸಿಕೊಟ್ಟೆ."

ಮಂಗಳೂರಿನ 'ವಿವೇಕಾಭ್ಯುದಯ'ದವರು 'ಭರತೇಶ ವೈಭವ'ದ ಎರಡನೆಯ ಮುದ್ರಣವನ್ನು (ಭೋಗವಿಜಯ ಮಾತ್ರ) ೧೯೪೮ರಲ್ಲಿ ಮಾಡಿದರು. ಈ ಮುದ್ರಣದಲ್ಲಿ 'ಸ್ತ್ರೀರತ್ನಸಂಭೋಗ ಸಂಧಿ'ಯ ೧೮೫ ಪದಗಳನ್ನು ಪರಿಶಿಷ್ಟದಲ್ಲಿ ಕೊಟ್ಟುದು ಒಂದು ವೈಶಿಷ್ಟ್ಯ. ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾಲಯ ಇವರು ೧೯೫೫ರಲ್ಲಿ ಪ್ರಕಟಪಡಿಸಿದ 'ಭರತೇಶ ವೈಭವ' ಸಂಗ್ರಹ ದಲ್ಲಿರುವ ಈ ಸಂಧಿಯಲ್ಲಿ ಕೂಡ ಬರೇ ೧೨ ಪದ್ಯಗಳನ್ನು ಕೊಟ್ಟಿ ದ್ದಾರೆ. ಉಗ್ರಾಣರು ಹೇಳಿದರು:

"ಕವಿಯ ದಿಟ್ಟತನವನ್ನು, ನೇರವಾಗಿ ಹೇಳುವ ಕಲೆಯನ್ನು ನೋಡಿದರೆ ಇಂದಿನ ಕವಿಗಳೂ ಬೆರಳು ಕಚ್ಚಬೇಕು. ಈ ಸಂಧಿಯ ಕೆಲವು ಪದ್ಯಗಳಲ್ಲಿರುವಷ್ಟು ಬಿಚ್ಚಿ ಯಾರಾದರೂ ನಮ್ಮ 'ಆಧುನಿಕ ಪ್ರಗತಿಶೀಲ'–'ನವ್ಯ' ಕವಿಗಳು ಹೇಳಿದ್ದಾರೆಯೆ?" ಅದಕ್ಕೆ ಉದಾ ಹರಣೆಯಾಗಿ ಬರೇ ೬ ಪದ್ಯಗಳನ್ನು ಇಲ್ಲಿ ಕೊಡಲಾಗಿದೆ:

ತಂಬುಲಗೊಳ್ಳೆಂಬನೊಲ್ಲಳು ಮೊಗವೆತ್ತಿ ।
ಚುಂಬಿಸಿದನು ಬುರುಬುರನೆ ॥
ಅಂಬುಜಮುಖಿಯ ಸರ್ವಾಂಗದೊಳಾತುರ ।
ತುಂಬಿತು ತೊಲಗಿತು ಭೀತಿ ॥

ಹದನಾದ ನಾಣುದಾಣಕೆ ಲಿಂಗಯೋಗವ ।
ಪದುಳಿಸುವಾಗ ಸ್ವರ್ಗವನು ॥
ಮಿದಿಯದೆ ಗೇಣು ಚೋಟೆನೆ ತೋರುತಿ ।
ದ್ದುದಿನ್ನದರೊಂದು ಸೊಬಗನೇನೆಂಬೆ ॥

ಮೊಲೆಗೆ ಕೈಯಿಕ್ಕುತ ಮೊಗದೊಳು ಮೊಗವಿಕ್ಕ ।
ತಲುಗಿದನಾ ರಾಜ ಮೋಹಿ ॥
ನಳಿತೋಳಲಪ್ಪುತ ಕಟಿ ತೊಡೆ ಕುಣಿಸುತ ।
ಲಲಿತಾಂಗಿ ಮುಳಿಸಾಂತಳೊಡನೆ ॥

ತೊಲಗಿತು ಹೊದಪಿನ ಮರೆಸುತ್ತ ದೀಪದ ।
ಬೆಳಕಿನೊಳಗೆ ತಮ್ಮ ಮೈಯು ॥
ಚೆಲುವನೊಬ್ಬೊಬ್ಬರು ನೋಡಿದರಹಹ ಕಂ ।
ಗಳ ಜನ್ಮ ಸಫಲವಾದಂತೆ ॥

ಉಬ್ಬುವ ತಗ್ಗುವ ಚುಂಬಿಪ ಪೊಂದಿಪ ।
ಶಿಬ್ಬಳಿಗೆಡುವ ಕೂಡಿರಿವ ॥
ಕೊಬ್ಬೆಸೆದುದು ಸುರಮಿಥುನಗಳಮೃತದ ।
ಹಬ್ಬವ ಮಾಡುವಂದದೊಳು ॥

ಸುಳಿಗಾಳಿ ನಿಲಿ ತೆರೆ ನಿಲುವಂತೆ ರತಿಯಾಟ ।
ನಿಲೆ ನಿಂದುದೊಡನೆ ಮೈಯಾಟ ॥
ಬಲಿತು ಕಟ್ಟಿದ ಕಟ್ಟಿದಂತಿರುವಾದ ।
ನಳಿದೋಳ್ಗಳಿದ್ದುವು ತಬ್ಬಿ ॥

ಇದಕ್ಕೂ ಹೆಚ್ಚಾಗಿ ರತಿಕ್ರೀಡೆಯ ಹಂತಹಂತಗಳನ್ನೂ ಬಿಚ್ಚಿ, ಬಿಡಿಸಿ ಯಾವ ಕವಿಯೂ ಹೇಳದ ರೀತಿಯಲ್ಲಿ ಕಾಮಶಾಸ್ತ್ರ ಪಂಡಿತನಂತೆ ವಿವರಣೆ ನೀಡಿದ್ದಾನೆ ರತ್ನಾಕರ.

ತಾನು ಪರಿಶೋಧಿಸಿ, ಸಂಪಾದಿಸಿದ 'ಭರತೇಶವೈಭವದ' ಪ್ರಕಟಣೆಯಲ್ಲಿ ಉಗ್ರಾಣರು ೩೨ ಪುಟಗಳ ವಿದ್ವತ್‌ಪೂರ್ಣ ಪೀಠಿಕೆ ಬರೆದಿದ್ದಾರೆ. ಅದರಲ್ಲಿ ರತ್ನಾಕರ ಕವಿ ರಚಿತ ಕೃತಿಗಳ ವಿಹಂಗಮ ನೋಟವನ್ನು ಮುಗಿಸಿ, ಕವಿಯ ಜೀವನ, ಕಾಲ, ಅವನ ಉದ್ದೇಶ, ಕಾವ್ಯಕ್ಕೆ ದೊರೆತ ಆದರಗಳನ್ನು ವಿವರಿಸಿ, 'ಭರತೇಶ ವೈಭವದ' ಕಥಾಸಾರ ಕೊಟ್ಟು, ವ್ಯಕ್ತಿಚಿತ್ರಗಳನ್ನು ಬರೆದಿದ್ದಾರೆ. ರತ್ನಾಕರನ

ಸರಳ ಸುಂದರ ಶೈಲಿ, ರಚನಾಚಾತುರ್ಯ, ವರ್ಣನಾಕ್ರಮ, ರಸೋತ್ಪಾದನೆ, ಶೃಂಗಾರಯೋಗ – ಭೋಗಸಮನ್ವಯ, ಸಂಗೀತ ನಾಟ್ಯ ಪ್ರಾವೀಣ್ಯ, ಇತರ ಕವಿಗಳೊಂದಿಗೆ ಹೋಲಿಕೆಯನ್ನು ಮಾಡಿ ರತ್ನಾಕರನು ಕನ್ನಡದಷ್ಟೇ ಏಕೆ? ಜಗತ್ತಿನ ಮಹಾಕವಿಗಳ ಸಾಲಿಗೆ ಸೇರಬೇಕಾದವನು ಎಂದು ತೋರಿಸಿಕೊಟ್ಟಿದ್ದಾರೆ. ಅದೇ ಉಗ್ರಾಣರ ಮಹಾಕೊಡುಗೆ. ಅದನ್ನವರು ರತ್ನಾಕರನ ಭಾಷೆಯಲ್ಲೇ ಆರಂಭದಲ್ಲಿ ತಿಳಿಹೇಳಿದ್ದಾರೆ –

ಆದಿಯಿಾ ಜಗಕೆಲ್ಲ ತಾನಾರಾತನ ದಿವ್ಯ ।
ಪಾದಕೆರಗಿ ಭಕ್ತಿಯಿಂದ ॥
ಆದಿ ಚಕ್ರೇಶ ಶ್ರೀ ಭರತೇಶವೈಭವ ।
ದಾದಿಯಲಿದನಿಷ್ಟು ಬರೆವೆ ॥ ೧ ॥

ರತ್ನಾಕರಾದ್ಯನ ಗುಣವ ಕಾಣಿಪೆನೆಂತು ।
ರತ್ನಾಕರನು ತಾನು ನಿಜದಿ ॥
ರತ್ನಾಕರದೊಳೊಮ್ಮೆ ಮುಳುಗಿ ತೆಗೆದ ಕೆಲ ।
ರತ್ನಗಳನು ಸಮರ್ಪಿಸುವೆ ॥ ೨ ॥

ಕಿರುಮತಿಯೆನಗೀ ಕೃತಿಯ ಚಮತ್ಕೃತಿಯ ಬಿ ।
ತ್ತರಿಸುವೊಡರಿದದರಿಂದ ॥
ವರಕಾಂಚನಾದ್ರಿಯ ಕನ್ನಡಿಯೊಳು ತೋರ್ಪ
ತೆರನಂತೆ ಬಲ್ಲನಿತೊರೆವೆ ॥ ೩ ॥

೦೦ ೦೦ ೦೦

## ೩. ಶಿಕ್ಷಕ

ಉಗ್ರಾಣರು ಹುಟ್ಟು ಶಿಕ್ಷಕರು. ಮುಂದೆ ಪಂಜೆಯುವರ ಸ್ಫೂರ್ತಿ ಬೆಂಬಲಗಳು ಅವರ ಒಲವಿಗೆ ಒತ್ತಾಸೆಯಾಗಿ ನಿಂತುವು. ಶಿಕ್ಷಣವೃತ್ತಿಯನ್ನು ಜೀವನೋಪಾಯಕ್ಕಾಗಿ ಕೈಗೊಂಡರೂ ಉಗ್ರಾಣರು ಬರೇ ನಾಲ್ಕು ಗೋಡೆಗಳೊಳಗಿನ, ಪಾಠ್ಯಪುಸ್ತಕದ ಶಿಕ್ಷಕರಾಗಿರಲಿಲ್ಲ. ಪಾಠ್ಯಪುಸ್ತಕದಲ್ಲಿರುವುದಕ್ಕಿಂತ ಹೆಚ್ಚಿನದನ್ನು ಅವರು ಕಲಿಸಿದರು. ಉಪಾಧ್ಯಾಯನಾದವನು ಬರೇ ಯಾಂತ್ರಿಕವಾಗಿ ಪಾಠ ಹೇಳಿದರೆ ಬಳೆಯುವ ಮಕ್ಕಳಿಗೆ ಏನು ತಿಳಿದೀತು? ಶಿಕ್ಷಕನು ತನ್ನ ಕೆಲಸದಲ್ಲಿ ಒಂದು ಬಗೆಯ ಆಸಕ್ತಿ, ಸಂತೃಪ್ತಿಗಳನ್ನು ಪಡೆದರೆ ಮಾತ್ರ ಅವನ ಉದ್ದೇಶವೂ ಸಾರ್ಥಕವಾದೀತು ಎಂದು ನಂಬಿದವರು ಉಗ್ರಾಣರು. ವಿದ್ಯಾರ್ಥಿಗಳ, ಅರ್ಥಾತ್ ಮುಂದಿನ ಪೀಳಿಗೆಯ ಸಮ್ಯಕ್ ಸಮೃದ್ಧಿಗೆ ಶಿಕ್ಷಕ ಪೂರಕನಾಗಬೇಕೆಂದು ಅವರು ಅರಿತಿದ್ದರು. ಎಂದೇ ಶಿಕ್ಷಣ ಕ್ರಮದಲ್ಲಿ ಅವರು ಪಂಜೆಯವರಿಗಿಂತ ಒಂದು ಹೆಜ್ಜೆ ಮುಂದಿಟ್ಟರು. ಪದ್ಯವನ್ನು ಹಾಡಿಯೇ ಕಲಿಸಬೇಕು, 'ಶಬ್ದಕ್ಕೆ ಶಬ್ದ ಅರ್ಥ ಕೊಟ್ಟು ಪ್ರತಿಪದಾರ್ಥ ಅನುವಾದಗಳನ್ನು ಮಾಡಿಸುವುದಕ್ಕಿಂತಲೂ ಅಲ್ಲಿ ವರ್ಣಿತವಾದ ಚಿತ್ರವು ವಿದ್ಯಾರ್ಥಿಗಳ ಕಣ್ಣಿಗೆ ಕಾಣಿಸುವಂತೆ ಅಗತ್ಯವಾದ ಕಡೆ ಪದಚ್ಛೇದ ವಿರಾಮ ಸ್ವರಭೇದಗಳಿಂದ ಹಾಡಿ ಅದನ್ನು ಸ್ಪಷ್ಟ ಮಾಡುವುದುತ್ತಮ' ಎಂಬ ಪಂಜೆಯುವರ ಶಿಕ್ಷಣ ಕ್ರಮದಲ್ಲಿ ಅವರು ಕಲಿಸಿದರಷ್ಟೇ ಅಲ್ಲ, ಹಳೆಗನ್ನಡವೆಂದರೆ ಹಾಳುಗನ್ನಡ ಎಂದು ನಾಲಿಗೆ ಕಚ್ಚುತ್ತಿದ್ದ ವಿದ್ಯಾರ್ಥಿಗಳಿಗೂ ಅದನ್ನು ಹಗುರವಾಗಿ, ಸರಳವಾಗಿ ತೋರಿಸಿ ಆಸಕ್ತಿ ಹುಟ್ಟುವಂತೆ ಮಾಡಿದರು. ಇದಕ್ಕೆ ನಿದರ್ಶನ – ಕನ್ನಡ ಪಂಡಿತರ ಕ್ಲಾಸು ಎಂದರೆ ಗಲಾಟೆಯ ಕ್ಲಾಸು ಎಂಬ ಮಾತಿಗೆ ಉಗ್ರಾಣರು ಅಪವಾದವಾಗಿದ್ದುದು.

ಇಂಗ್ಲೀಷು-ಕನ್ನಡ ಉಭಯ ಭಾಷಾ ಪಂಡಿತರಾದ ಉಗ್ರಾ

ಣರು ಎರಡನ್ನೂ ಕಲಿಸಿದರು. "ವ್ಯಾಕರಣ ಕಲಿಸಿದರೆ ಉಗ್ರಾಣ ಮಾಸ್ಟ್ರು ಕಲಿಸಿದಂತೆ" ಎಂದೂ ಅವರ ವಿದ್ಯಾರ್ಥಿಗಳು ಕೂಡ– ಇಲ್ಲವಾದರೆ ಸಪ್ಪಗಾಗಿರುತ್ತಿದ್ದ–ಕಬ್ಬಿಣದ ಕಡಲೆಕಾಯಿಯ ವ್ಯಾಕರಣ ಪಾಠಗಳನ್ನು ಮೆಚ್ಚಿಕೊಂಡಿದ್ದರು. ಅವರ ಇಂಗ್ಲೀಷು ವ್ಯಾಕರಣ ಕಲಿಸುವ ಬಗೆಯನ್ನು ಸ್ವತಃ ಪಂಜೆಯವರೇ ನೋಡಿ ಹೆಮ್ಮೆಪಟ್ಟುಕೊಂಡಿದ್ದರಂತೆ. ಅದರ ಕುರಿತಾಗಿ ಉಗ್ರಾಣರು ನನಗೆ ಹಳೆಯ ಸಂಗತಿಯೊಂದನ್ನು ಹೇಳಿದರು.

"ಒಮ್ಮೆ ಪಂಜೆಯವರು ನನ್ನಲ್ಲಿಗೆ ಬಂದು ಹೀಗೆಂದರು: 'ನೀನು ಒಂದು ಇಂಗ್ಲೀಷು ವ್ಯಾಕರಣ ಪುಸ್ತಕ ಬರಿ. ನಾನು ಕನ್ನಡದಲ್ಲಿ ಬರೆಯುತ್ತೇನೆ. ನಿನ್ನದನ್ನು ನನ್ನ ಹೆಸರಿನಲ್ಲೂ ನನ್ನದನ್ನು ನಿನ್ನ ಹೆಸರಿನಲ್ಲೂ ಪ್ರಕಟಿಸೋಣ'. ಅವರು ಬಿ.ಎ.,ಎಲ್.ಟಿ. ಆಗಿದ್ದರು. ನಾನಾದರೋ ಈ ಸಲಹೆಯನ್ನು ಅಷ್ಟೊಂದು ಮೆಚ್ಚಿಕೊಳ್ಳಲಿಲ್ಲವೆನ್ನಿ. ಮುಂದೆ ಈ ಯೋಜನೆ ಕಾರ್ಯಗತವಾಗಲೂ ಇಲ್ಲ."

ಎಸ್.ಎಸ್.ಎಲ್.ಸಿ. ಮುಗಿಸಿ ಶಿಕ್ಷಕ ತರಬೇತಿ ಮಾಡಿ ಕನ್ನಡ ಮೇಷ್ಟ್ರಾದರೂ ಉಗ್ರಾಣರು ಎಂ.ಎ. ವಿದ್ಯಾರ್ಥಿಗಳಿಗೂ ಕಲಿಸುವ ಪ್ರೀತಿಯಿಂದ ಕಲಿಸಿದ್ದಾರೆ. ಕನ್ನಡ ವಿದ್ವಾನ್, ಪಂಡಿತ ಪರೀಕ್ಷೆಗೆ ಕೂತುಕೊಳ್ಳುವವರಂತೂ ಸರಿಯೆ.

"ನಾನೂ ಎಲ್ಲರಂತೆ ಕಾಲೇಜಿಗೆ ಹೋಗಿದ್ದರೆ ಬಹುಶಃ ಇದೆಲ್ಲ ಸಾಧ್ಯವಾಗುತ್ತಿತ್ತೋ ಇಲ್ಲವೊ. ಕಾಲೇಜಿನ ಪಾಠ್ಯಪುಸ್ತಕಗಳನ್ನು, ಮೂಲಗ್ರಂಥಗಳನ್ನು ನಾನು ಜ್ಞಾನದಾಹದಿಂದ ಓದಿದೆ. ಭಾಷಾ ವ್ಯಾಮೋಹದಿಂದ ಓದಿದೆ. ಶೇಕ್ಸ್‌ಪಿಯರ್, ಶೆಲ್ಲಿ, ಬೈರನ್, ವರ್ಡ್ಸ್‌ವರ್ಥ ಕಾವ್ಯಗಳನ್ನು, ವಿಮರ್ಶೆಗಳನ್ನು ಪರೀಕ್ಷೆಗಳನ್ನು ಪಾಸು ಮಾಡಲಿಕ್ಕೆ ಓದಿದ್ದರೆ ಅವುಗಳ ಸವಿ ನನಗೆ ಹೇಗೆ ತಿಳಿಯಬೇಕಿತ್ತು? ಅವುಗಳ ಸ್ವಾದವನ್ನು ತಿಳಿಯಲೆಂದೇ ನಾನು ಓದಿದೆ.

ಪುಸ್ತಕಗಳನ್ನು ಎರವಲು ಪಡೆದೆ, ಬೇಡಿದೆ, ಕೊಂಡುಕೊಂಡೆ. ನನ್ನ ಪುಸ್ತಕದ ಹುಚ್ಚು ಹೆಚ್ಚಾದಂತೆ ಸಂಗ್ರಹವೂ ಹೆಚ್ಚಾಯಿತು. ಪುತ್ತೂರು ಬಿಟ್ಟು ಬರುವಾಗ ನಾನು ಎಂ.ಎ. ಕಲಿಸಿದ ಲೀಲಾ ಭಟ್‌ರವರಿಗೆ ನನ್ನ ಪುಸ್ತಕ ಭಂಡಾರವನ್ನು ಕೊಟ್ಟು ಬಂದೆ" ಎಂದರು.

ಸ್ವತಃ ಜ್ಞಾನದಾಹವಿದ್ದ ಪುಸ್ತಕಪ್ರೇಮಿ ಉಗ್ರಾಣರು ಶಿಕ್ಷಣ ಕ್ಷೇತ್ರದಲ್ಲಿ ಬಹುಶಃ ಯಾವ ಕನ್ನಡಮೇಸ್ಟ್ರೂ ಮಾಡದ ಇನ್ನೊಂದು ಮಹತ್ವದ ದೇಣಿಗೆ ಎಂದರೆ ಪುತ್ತೂರು ಬೋರ್ಡು ಹೈಸ್ಕೂಲಿನ ಗ್ರಂಥಾಲಯವನ್ನು ತನ್ನ ಮಗುವಿನಂತೆ ಸಾಕಿ, ಸಲಹಿ ಪೋಷಿಸಿ ದುದು, ಅಭಿವೃದ್ಧಿಗೊಳಿಸಿದುದು. ಸ್ವಪ್ರೇರಣೆಯಿಂದಲೇ ಎಷ್ಟೋ ಕಾಲ ಗ್ರಂಥಪಾಲನ ಕೆಲಸವನ್ನೂ ಶ್ರದ್ಧೆಯಿಂದ ಮಾಡಿದರು. ಈ ಕೆಲಸದಲ್ಲಿ ಅವರಿಗಿದ್ದ ಒಂದೇ ಒಂದು ಸ್ವಾರ್ಥವೆಂದರೆ ಹೆಚ್ಚು ಪುಸ್ತಕಗಳನ್ನು ಓದುವ ಲಾಭ.

ಗಣಪತಿ ಹೈಸ್ಕೂಲಿನಲ್ಲಿ ಉಗ್ರಾಣರು ಶಿಕ್ಷಣದ ತರಬೇತಿ ಪಡೆಯುವಾಗಿನ ಒಂದೆರಡು ಸ್ವಾರಸ್ಯಕರ ಅನುಭವಗಳನ್ನು ಅವರು ಯಕ್ಷಗಾನದ ಅರ್ಥಧಾರಿಯಂತೆ ಬಹು ರಸವತ್ತಾಗಿ ವರ್ಣಿಸುತ್ತಾರೆ :

"ಅದು ಬ್ರಿಟಿಷರ ಕಾಲ; ಬಹಳ ಶಿಸ್ತಿನ ಕಾಲ. ನಾನು ಕಲಿಯು ತ್ತಿರುವಾಗ ರಾವ್ ಬಹಾದೂರ್ ಎಂ. ರಘುನಾಥರಾವ್ ಅವರು ಗೌರವ ಮುಖ್ಯೋಪಾಧ್ಯಾಯರಾಗಿದ್ದರು. ಅವರು ತುಂಬ ಶಿಸ್ತಿ ನವರು. ಪ್ರತಿ ಶುಕ್ರವಾರ ನಾವೆಲ್ಲ ಶಿಕ್ಷಕ-ವಿದ್ಯಾರ್ಥಿಗಳು ಕೂಡಿ ವಿಚಾರಕೂಟ ನಡೆಸುತ್ತಿದ್ದೆವು. ಅದು ರಘುನಾಥರಾಯರ ಉಪ ಸ್ಥಿತಿಯಲ್ಲೇ ನಡೆಯುವುದು ವಾಡಿಕೆ. ಈ ವಿಚಾರಕೂಟದಲ್ಲಿ ಒಬ್ಬ ಉಪಾಧ್ಯಾಯ ಅಂದಿನ ವಿಷಯದ ಮೇಲೆ ಭಾಷಣಮಾಡುವುದು ಕ್ರಮ. ಈ ಭಾಷಣ ಮುಗಿದೊಡನೆ ಯಾರೂ ಚಪ್ಪಾಳೆ ತಟ್ಟ

ಬಾರದು ಎಂಬುದು ರಘುನಾಥರಾಯರ ಕಟ್ಟಾಜ್ಞೆ. ನಾವೆಲ್ಲ ಅವರಿಗೆ ತುಂಬ ಹೆದರುತ್ತಿದ್ದೆವು......ಅದೊಂದು ದಿನ ಕೂಟದಲ್ಲಿ ಮಾತನಾಡುವ ಸರದಿ ನನಗೂ ಬಂತು. ವಿಷಯ – 'ಆಳಾದವನು ಆಳಿಯಾನು' ಎಂಬುದು. ಮೊದಲಿನಿಂದಲೂ ನನ್ನದೊಂದು ಕ್ರಮ. ಮಾತನಾಡಲು ವಿಷಯ ಸಿದ್ಧಮಾಡಿ ತಯಾರಿ ಮಾಡುವವನಲ್ಲ ನಾನು. ಯಾವ ಪೂರ್ವ ಸಿದ್ಧತೆಯೂ ಇಲ್ಲದೆ ನೇರವಾಗಿ ಮಾತ ನಾಡುವುದರಲ್ಲಿ ಒಂದು ಮೋಜಿದೆ. ಆಗ ಸ್ಫೂರ್ತಿ ಬರುತ್ತದೆ. ಅಂದು ಕೂಡ ಹಾಗೆಯೇ ಆಯಿತು. ನನ್ನ ಭಾಷಣ ಎಷ್ಟು ಪ್ರಭಾವ ಶಾಲಿಯಾಗಿ ಆಯಿತೆಂದರೆ ಕೊನೆಗೆ ಸ್ವತಃ ರಘುನಾಥರಾಯರೇ ಪಟಪಟನೆ ಚಪ್ಪಾಳೆ ತಟ್ಟಿಬಿಟ್ಟರು. ವಿದ್ಯಾರ್ಥಿಗಳಿಗೆಲ್ಲ ಎಲ್ಲಿಲ್ಲದ ಆಶ್ಚರ್ಯ!

"ಇನ್ನೊಮ್ಮೆ ತಮಾಷೆ ನಡೆಯಿತು. ವರ್ಷಾವಧಿ ಇನ್ಸ್‌ಪೆಕ್ಷ ನ್ನಿಗೆ ಸರ್ಕಲ್ ಇನ್ಸ್‌ಪೆಕ್ಟರರಾದ ಯೇಟ್ಸ್ ಸಾಹೇಬರು ಬರುವವ ರಿದ್ದರು. ಅವರೊಂದಿಗೆ ಅಸಿಸ್ಟಾಂಟ್ ಇನ್ಸ್‌ಪೆಕ್ಟರರಾದ ಪಂಜೆ ಯವರೂ ಬಂದೇ ಬರುತ್ತಿದ್ದರು. ಬೆಂಗಳೂರು, ಕೊಡಗು, ಮಂಗ ಳೂರು ಸರ್ಕಲ್ ಇನ್ಸ್‌ಪೆಕ್ಟರರಾಗಿದ್ದ ಯೇಟ್ಸ್‌ರಿಗೆ ಎಲ್ಲರೂ ಹೆದರಿ ಸಾಯುತ್ತಿದ್ದರು. ಯೇಟ್ಸ್‌ರಿಗೆ ಚಾರಿತ್ರಿಕ ಕಥೆಗಳೆಂದರೆ ಬಹಳ ಇಷ್ಟ. ಶೈಕ್ಷಣಿಕ ವಿದ್ಯಾರ್ಥಿಗಳು ಅಂಥ ಕಥೆಗಳನ್ನು ಚಿತ್ರ, ಚಾರ್ಟ್ಸ್, ಮ್ಯಾಪ್‌ಗಳಿಂದ ರಂಗಾಗಿ ವರ್ಣಿಸಿದರಂತೂ ಅವರಿಗೆ ಬಹಳ ಖುಷಿ. ಆಗ ನಮ್ಮ ಹೆಡ್‌ಮಾಸ್ತರರು ತೊನ್ಸೆ ಮಂಗೇಶ ರಾಯರು; ಅವರು ಅಸಿಸ್ಟಾಂಟ್ ಹೆಡ್‌ಮಾಸ್ಟರ್‌ರಾದ ವೆಂಕಟ ರಾಯ ಮಲ್ಯರನ್ನು ಕರೆದು ಇನ್ಸ್‌ಪೆಕ್ಷನಿಗೆ ಎಲ್ಲ ಸಿದ್ಧತೆಗಳನ್ನೂ ಮಾಡುವಂತೆ ಹೇಳಿದರು. ಮಲ್ಯ ಮಾಸ್ತರಿಗೆ ಮೊದಲಿನಿಂದಲೂ ನನ್ನನ್ನು ನೋಡಿದರೆ ಅಷ್ಟಕ್ಕಷ್ಟೆ. ಇದಕ್ಕೆ ಮೊದಲು ನಡೆದ ಒಂದು ಪ್ರಕರಣ ಇದಕ್ಕೆ ಕಾರಣವಿರಬಹುದು......

"ಟ್ರೈನಿಂಗ್‌ನಲ್ಲಿ ನಮಗೆ 'ಆಬ್ಸರ್ವೇಷನ್' ಕ್ಲಾಸಸ್ ಇರುತ್ತಿದ್ದುವು. ಅಂದರೆ ಬೇರೆ ಉಪಾಧ್ಯಾಯರು ಪಾಠ ಮಾಡುವುದನ್ನು ನೋಡಿ, ನಾವು ನೋಟ್ಸ್ ಮಾಡಿಕೊಳ್ಳುತ್ತಿರಬೇಕು. ಈ ರೀತಿ ನಾನು ಟಿಪ್ಪಣಿ ಮಾಡಿಕೊಳ್ಳುತ್ತಿಲ್ಲ ಎಂದು ಒಂದು ಬಾರಿ ಮಲ್ಯ ಮಾಸ್ಟ್ರು ಹೆಡ್‌ಮಾಸ್ಟರರಿಗೆ ದೂರು ಕೊಟ್ಟರು. ಹೆಡ್ ಮಾಸ್ಟರ್ ತೊನ್ಸೆಯವರಾದರೋ ನನ್ನ ಚಿಕ್ಕಪ್ಪನೇ. ಅವರು ನಿಜವಾಗಿಯೂ ನಾಡಕರ್ಣಿ ಕುಟುಂಬದವರು. ತೊನ್ಸೆ ಕುಟುಂಬದವರು ಅವರನ್ನು ಸಾಕಲು ತೆಗೆದುಕೊಂಡಿದ್ದರು. ನಾನು ಅವರನ್ನು 'ಅನಂತ ಬಾಪ್ಪಾ' ಎಂದೇ ಕರಿಯುುವುದಿತ್ತು. ಸರಿ ಅವರಿಂದ ನನಗೆ ಕರೆ ಬಂದಿತು. 'ನಿನ್ನ ಚಿಕ್ಕಪ್ಪ ಹೆಡ್‌ಮಾಸ್ಟರೆಂದು ಹಾರುತ್ತೀಯಾ?' ಎಂದು ಛೀಮಾರಿ ಹಾಕಿದರು. ವಿಷಯ ಏನೆಂದು ಕೇಳಿದಾಗ, ಅಬ್ಸರ್ವೇಷನ್ ತರಗತಿಯಲ್ಲಿ ನಾನು ಟಿಪ್ಪಣಿಯನ್ನೇ ಮಾಡಿಕೊಳ್ಳುವುದಿಲ್ಲ ಎಂದು ತನಗೆ ದೂರು ಬಂದಿದೆ ಎಂದು ಹೇಳಿದರು. ನಾನು ಆಗ ಉತ್ತರಿಸಿದೆ, 'ನಿಜ. ಆಬ್ಸರ್ವೇಷನ್ ತರಗತಿಯಲ್ಲಿ ನಾನು ಬರೇ ಆಬ್ಸರ್ವ್ ಮಾಡುತ್ತೇನೆ. ನೋಟ್ಸನ್ನು ಅಂದೇ ಮನೆಗೆ ಹೋಗಿ ಬರೆದುಬಿಡುತ್ತೇನೆ. ಎಂದು ಅಂದಿನವರೆಗೆ ಬರೆದುದನ್ನು ಅವರಿಗೆ ತೋರಿಸಿದೆ. ಈ ಘಟನೆಯಿಂದ ಮಲ್ಯ ಮಾಸ್ಟರರಿಗೆ ನನ್ನ ಮೇಲೆ ಒಂದು ಕಣ್ಣಿತ್ತು......

"ಯೇಟ್ಸ್ ಬರುವ ದಿನವೂ ಹತ್ತಿರವಾಯಿತು. ಇನ್ನೇನು, ನಾಳೆ ಇನ್ಸ್‌ಪೆಕ್ಶನ್ ಎಂದರೆ ಅದಕ್ಕಾಗಿ ನಾನು ಏನೂ ಮಾಡಬೇಕಾಗಿಲ್ಲ ಎಂದು ಮಲ್ಯ ಮಾಸ್ಟರರು ನನಗೆ ಸ್ಪಷ್ಟಪಡಿಸಿದ್ದರು. ನಾನೂ ನಿರಾತಂಕವಾಗಿದ್ದೆ. ಯೇಟ್ಸರೂ ಬಂದೇಬಿಟ್ಟರು. ಶಿಕ್ಷಣ ವಿದ್ಯಾರ್ಥಿಗಳೆಲ್ಲ ಕೂಡಿದರು. ಪಂಜೆಯವರು, ರಘುನಾಥರಾಯರು, ಹಿರಿಯ ಉಪಾಧ್ಯಾಯರಾದ ಉಭಯಾ ಗೋಪಾಳರಾಯರು, ಮುಖ್ಯೋಪಾಧ್ಯಾಯ ತೊನ್ಸೆಯವರು, ಮಲ್ಯರು

ಎಲ್ಲರೂ ಇದ್ದರು. ಇನ್ನು ಆರಂಭ ಮಾಡಬಹುದೆಂದು ತೋನ್ಸೆಯವರು ಮಲ್ಯರಿಗೆ ಕಣ್ಸನ್ನೆಯಲ್ಲಿ ತಿಳಿಸಿದರು. ಯೇಟ್ಸ್ ಸಾಹೇಬರೆದುರಿಗೆ ಚಾರಿತ್ರಿಕ ಕಥೆಯೊಂದನ್ನು ಹೇಳುವ ಅಗ್ನಿಪರೀಕ್ಷೆ ಯಾರಿಗೆ ಬರುತ್ತದೆಯೋ ಎಂದು ಎಲ್ಲರೂ ಕಾತುರದಿಂದಿದ್ದರು. ಇದು ನನಗಲ್ಲ ಎಂದು ಮೊದಲೇ ಗೊತ್ತಿದ್ದ ನಾನು ಸ್ಥಿತಪ್ರಜ್ಞನಂತೆ ಕೂತಿದ್ದೆ. ಮಲ್ಯ ಮಾಸ್ತರರು ಒಬ್ಬ ಹುಡುಗನ ಮುಖ ನೋಡಿದರು; ಆತ ಮುಖ ಕೆಳಗೆ ಮಾಡಿದ. ಇನ್ನೊಬ್ಬನೂ ಹಾಗೆಯೇ ತಲೆ ಕೆಳಗೆ ಹಾಕಿದ. ಯಾರನ್ನು ನೋಡಿದರೂ ಎಲ್ಲರೂ ತಲೆ ಕೆಳಗೆ ಹಾಕುವವರೇ. ಕೊನೆಗೆ ಸೇಡು ತೀರಿಸುವಂತೆ ನನ್ನತ್ತ ನೋಡಿದರು – ಮಲ್ಯ ಮಾಸ್ಟರರು. ನಾನೂ ನಿಂತೆ – ಅದೇನೋ ಹುಚ್ಚು ಧೈರ್ಯದಿಂದ, 'ಸಿದ್ಧನಾಗಿದ್ದೇನೆ' ಎಂಬಂತೆ.

"'ಯಾವ ತರಗತಿಗೆ ಕಲಿಸುವೆ?' ಎಂದು ಪ್ರಶ್ನಿಸಿದರು ಯೇಟ್ಸರು ಇಂಗ್ಲೀಷಿನಲ್ಲಿ.

"'ಫಸ್ಟ್ ಫಾರ್ಮ್ ಸರ್' ಎಂದೆ. ಆ ಕ್ಲಾಸಿನ ಹುಡುಗರನ್ನು ಕರೆಸಿದುದಾಯಿತು. ನನ್ನ ಮುಂದೆ ಹಾಗೂ ಎಡಗಡೆ ಹುಡುಗರು, ಬಲಬದಿಗೆ ಇನ್ಸ್‌ಪೆಕ್ಟನಿಗೆ ಬಂದವರು; ಉಪಾಧ್ಯಾಯರು; ಅವರ ಹಿಂದೆ ನನ್ನ ಸಹಪಾಠಿಗಳು. ಕೋರ್ಟಿನಲ್ಲಿ ವಕಾಲತ್ತು ಆರಂಭವಾದಂತೆ ಯೇಟ್ಸರತ್ತ ತಿರುಗಿ ನಾನು ಕೇಳಿದೆ –

"'ಇದು ಬರೇ ಕಥೆ. ಚರಿತ್ರೆಯ ಪಾಠವಲ್ಲ ಆದುದರಿಂದ ಮ್ಯಾಪ್, ಚಾರ್ಟ್ಸ್ ತರಲಿಲ್ಲ ಸರ್" ಎಂದೆ.

"'ರೈಟ್' ಎಂದರವರು. ನನಗೆ ಧೈರ್ಯ ಬಂತು. ಮತ್ತೆ

"'ತರಗತಿಯಲ್ಲಿ ಹುಡುಗರು ವಿಪರೀತವಾಗಿದ್ದಾರೆ. ಅರ್ಧ ಕ್ಲಾಸನ್ನು ಡಿಸ್‌ಮಿಸ್ ಮಾಡಲೇ?' ಎಂದು ಕೇಳಿದೆ.

"'ಆಲ್ ರೈಟ್' ಎಂದರು ಯೇಟ್ಸ್‌ಸಾಹೇಬರು.

"ಎಲ್ಲರೂ ಬಾಯಲ್ಲಿ ಅಕ್ಕಿಕಾಳು ಹಾಕಿ ಕೂತಿದ್ದರು. ಮುಂದೆ

ಏನಾಗುತ್ತದೆಯೋ ಎಂದು ಎಲ್ಲರಿಗೂ ಹೆದರಿಕೆ. ಆದರೆ ಮಾತ ನಾಡಲಿಕ್ಕೆ ಒಬ್ಬರಿಗೂ ಧೈರ್ಯವಿಲ್ಲ...... ಅಂದು ನಾನು ಹೇಳಿ ದುದು 'ಹಸನ್, ಗಂಗೋ ಭಾಮಿನಿ' ಎಂಬ ಚಿಕ್ಕ ಕಥೆಯನ್ನು. ಅದೊಂದು ಸುಂದರವಾದ ನೀತಿಕಥೆ. ನನಗೆ ಆಗ ಎಲ್ಲೂ ಇಲ್ಲದ ಸ್ಫೂರ್ತಿ ಬಂದಿತ್ತು. ಆ ಕಥೆಯನ್ನು ಸರಳವಾಗಿ, ವಿವರವಾಗಿ ರಸವತ್ತಾಗಿ ಹೇಳಿದೆ. ಎಲ್ಲರ ಮುಖಗಳನ್ನು ನೋಡಿದಾಗಲೇ ಅವರೆಲ್ಲರೂ ಅದನ್ನು ತುಂಬ ಮೆಚ್ಚಿಕೊಂಡಿದ್ದರೆಂದು ಸ್ಪಷ್ಟ ವಾಯಿತು. ನಾನು ಕಥೆ ಹೇಳಿ ಮುಗಿಸಿದ ಬಳಿಕ ಕಥೆಯ ವಿಚಾರ ವಾಗಿ ಪ್ರಶ್ನೆ ಕೇಳಿದಾಗ ಎಲ್ಲರೂ ಸರಿಯಾದ ಉತ್ತರ ಕೊಟ್ಟರು. ಅನಂತರ ಅದನ್ನೇ ಯಾವ ವಿದ್ಯಾರ್ಥಿ ತುಳುವಿನಲ್ಲಿ ಚೆನ್ನಾಗಿ ಹೇಳುತ್ತಾನೆಯೋ ಅವನಿಗೆ ಒಂದು ರೂಪಾಯಿ ಬಹುಮಾನ ಕೊಡುತ್ತೇನೆ ಎಂದರು ಪಂಜೆಯವರು. ಫಸ್ಟ್ ಫಾರ್ಮಿನ ಒಬ್ಬ ಚೋಟುದ್ದ ಹುಡುಗ ತುಂಬ ಆಸಕ್ತಿಯಿಂದ ಆ ಕಥೆಯನ್ನು ವರ್ಣಿಸಿ ರೂಪಾಯಿ ಗಿಟ್ಟಿಸಿದ. ತರಗತಿಯ ಅವಧಿ ಮುಗಿಯಲು ಇನ್ನೂ ಕೆಲವು ನಿಮಿಷಗಳಿದ್ದುವು ಇಷ್ಟು ಹೊತ್ತು ಉಂಟು ಮಾಡಿದ ಪ್ರಭಾವವನ್ನು ಹಾಳು ಮಾಡಬಾರದೆಂದು ಯೇಟ್ಸರನ್ನು ಕೇಳಿದೆ–

'ನನ್ನ ಕ್ಲಾಸ್ ಮುಗಿಯಿತು. ವಿದ್ಯಾರ್ಥಿಗಳನ್ನು ಬಿಡಲೇ, ಸರ್'?

'ರೈಟ್' ಎಂದುಬಿಟ್ಟರು ಯೇಟ್ಸರು.

''ಈಗ ನನ್ನ ಪಾಠದ ಬಗೆಗೆ ವಿಮರ್ಶೆ ನಡೆಯಿತು – ನಮ್ಮ ಉಪಾಧ್ಯಾಯರೊಳಗೆ. ನನ್ನ ಶೈಲಿ ಬಹಳ ಕ್ಲಿಷ್ಟವಾಯಿತೆಂದು ಒಬ್ಬರು ಅಭಿಪ್ರಾಯಪಟ್ಟರು. ಅದನ್ನು ಅಲ್ಲಗಳೆದು ಯೇಟ್ಸ್ ರೆಂದರು: 'ತುಳುವಿನಲ್ಲಿ ಆ ಕಥೆಯನ್ನು ಒಬ್ಬ ವಿದ್ಯಾರ್ಥಿ ಹೇಳಿ ದುದೇ ಅದು ಅವರಿಗೆಲ್ಲ ಚೆನ್ನಾಗಿ ಅರ್ಥವಾಗುವಷ್ಟು ಸರಳ

ವಾಗಿತ್ತೆಂಬುದಕ್ಕೆ ಸಾಕ್ಷಿ'. ಮ್ಯಾಪ್, ಚಾರ್ಟ್ಸ್ ಏನೂ ತರಲಿಲ್ಲ ಎಂದು ಇನ್ನೊಬ್ಬರು ತಪ್ಪು ತೋರಿಸಿಕೊಟ್ಟರು. ನನ್ನ ಪರವಾಗಿ ಮತ್ತೆ ಯೇಟ್ಸರು 'ಅದರ ಅವಶ್ಯಕತೆ ಇದ್ದಿರಲಿಲ್ಲವೆಂದು ಉಗ್ರಾಣರು ಮೊದಲೇ ಸ್ಪಷ್ಟಪಡಿಸಿದ್ದರಲ್ಲ' ಎಂದು ಅವರ ಬಾಯಿ ಮುಚ್ಚಿಸಿದರು. ಅಷ್ಟೇ ಏಕೆ ತನ್ನ ಇನ್ಸ್‌ಪೆಕ್ಶನ್ ಕಾಲಕ್ಕೆ ಇಷ್ಟು ರಸವತ್ತಾಗಿ ಅಭಿನಯದೊಂದಿಗೆ ವರ್ಣಿಸಿದ ಕಥೆಯನ್ನೇ ತಾನು ಎಂದೂ ಕೇಳಿರಲಿಲ್ಲ ಎಂದು ಯೇಟ್ಸರು ತೀರ್ಪು ಕೊಟ್ಟು ಎಲ್ಲರ ಬಾಯಿಯನ್ನೂ ಮುಚ್ಚಿಸಿಬಿಟ್ಟರು."

ಹೀಗೆ ಶಿಕ್ಷಣ ತರಬೇತಿಯಾಗುತ್ತಿರುವಾಗಲೇ ಜಯಭೇರಿ ಹೊಡೆದ ಉಗ್ರಾಣರು ಶಿಕ್ಷಕರಾದ ಬಳಿಕ ಆದರ್ಶ ಉಪಾಧ್ಯಾಯ ರಾಧುದರಲ್ಲಿ ಆಶ್ಚರ್ಯವಿಲ್ಲ.

ಶಿಕ್ಷಕರಾಗಿ ಉಗ್ರಾಣರು ಮಾಡಿದ ಮಹತ್ವದ ಕೆಲಸವೆಂದರೆ ಮಕ್ಕಳಿಗಾಗಿ ಪದ್ಯಗಳನ್ನು ಬರೆದುದು. ಪಾಠ್ಯ ಪುಸ್ತಕಗಳನ್ನು ರಚಿಸಿದುದು. ಮಕ್ಕಳಿಗೆ ಸರಿಯಾಗಿ ಹೃದ್ಗತವಾಗುವಂತೆ ಪದ್ಯಗಳನ್ನು ಅವರು ಹಾಡಿ, ಅಭಿನಯಿಸುತ್ತಿದ್ದರು. "ಯಾವುದು ಸುಂದರವಾಗಿ ತೋರುವುದೋ ಅದನ್ನು ಬಾಯಿಪಾಠ ಮಾಡಿ" ಎಂದು ಮಕ್ಕಳಿಗೆ ಹೇಳುತ್ತಿದ್ದ ಉಗ್ರಾಣರು ಇನ್ನೊಂದು ಎಚ್ಚರಿಕೆಯನ್ನೂ ಕೊಡುತ್ತಿದ್ದರು – "ಬರೇ ಬಾಯಿಪಾಠವಲ್ಲ – ಹೃದಯವಾಗಬೇಕು – ಇಂಗ್ಲೀಷಿನಲ್ಲಿರುವಂತೆ By heart ಆಗಬೇಕು" – ಬಾಯಿಯೊಳಗಲ್ಲ, ಹೃದಯದೊಳಗೆ."

ಬಾಲಸಾಹಿತ್ಯ, ಬಾಸೆಲ್ ಮಿಷನ್, ಮೆಕ್ಮಿಲನ್ ಮತ್ತು ದಾಮೋದರ ಬಾಳಿಗರ ನವೋದಯ ಪಾಠಮಾಲೆಗಳಲ್ಲಿ ಉಗ್ರಾಣರ ಪದ್ಯಗಳು, ಪಾಠಗಳು ಹೇರಳವಾಗಿ ಬಂದಿವೆ. ಅವರು ಬರೆದ 'ಸೋಹ್ರಾಬ್ ರುಸ್ತುಂ' 'ದ್ರೋಣ ದ್ರುಪದ' ಸಂವಾದಗಳನ್ನು ಯಾವ ವಿದ್ಯಾರ್ಥಿಯೂ ಮರೆತಿರಲಿಕ್ಕಿಲ್ಲ. ಇದಲ್ಲದೆ

ಪ್ರೌಢ ಪಾಠಮಾಲಿಕೆಯನ್ನೂ ಬಾಲವ್ಯಾಕರಣವನ್ನೂ ಮಿಡ್ಲ್ ಸ್ಕೂಲಿನ ವಿದ್ಯಾರ್ಥಿಗಳಿಗಾಗಿ ಶಾಲಾವ್ಯಾಕರಣವನ್ನೂ ಉಗ್ರಾಣರು ಬರೆದಿದ್ದಾರೆ. ಅವರ ವ್ಯಾಕರಣ ಪದ್ಧತಿ ವಿನೂತನವಾಗಿ ಸರಳ ವ್ಯಾಕರಣವು ಭಾಷೆಯ ಸ್ಪಷ್ಟನೆಗಾಗಿರುವ ಮಾಧ್ಯಮ ವಲ್ಲದೆ ಅದೇ ಕೊನೆಯಲ್ಲ ಎಂಬುದು ಅವರಿಗೆ ಚೆನ್ನಾಗಿ ತಿಳಿದಿತ್ತು.

ಮಕ್ಕಳಿಗಾಗಿ ಕವಿತೆಗಳನ್ನಲ್ಲದೆ ಚಿಕ್ಕ ಚಿಕ್ಕ ನಾಟಕಗಳನ್ನೂ ಉಗ್ರಾಣರು ಬರೆದು ಶಾಲೆಯಲ್ಲಿ ಅವನ್ನು ಆಡಿಸಿದರು. ಅವರ ನಾಟ್ಯಪ್ರೇಮಕ್ಕೆ ಸಾಕ್ಷಿಯಾಗಿ ಪುತ್ತೂರಿನಲ್ಲಿ ಇಂದಿಗೂ ಹೊರಾಂಗಣ ರಂಗಭೂಮಿ ಇದೆ. ಆದರೆ ಉಗ್ರಾಣರು ಮಕ್ಕಳಿಗಾಗಿ ಬರೆದ ಕವನಗಳ ಒಂದು ಪ್ರಾತಿನಿಧಿಕ ಸಂಕಲನ ಇದುವರೆಗೂ ಬಾರದಿದ್ದುದು ದೊಡ್ಡ ಕೊರತೆಯೇ ಸರಿ.

ಉಗ್ರಾಣರ ಶಿಕ್ಷಕ ಜೀವನದಲ್ಲಿ ಅತಿ ಗೆಲುವಿನ ಗಳಿಗೆಯೆಂದರೆ ಅವರು ಕಲಿಸಿದ ಶಾಲೆಯಿಂದಲೇ ಗೌರವಿಸಿಕೊಳ್ಳುವುದು, ಇಂಥ ಸನ್ಮಾನ ಉಪಾಧ್ಯಾಯನೊಬ್ಬನ ಜೀವನದಲ್ಲಿ ಅಪೂರ್ವವಾದುದು.

ಉಗ್ರಾಣರು ಯಶಸ್ವೀ ಶಿಕ್ಷಕರಾದುದಕ್ಕೆ ಗೌರವ ಕೊಟ್ಟು ಬೋರ್ಡು ಹೈಸ್ಕೂಲಿನ ಸ್ವರ್ಣಮಹೋತ್ಸವಕ್ಕೆ ಅವರನ್ನು ಅಧ್ಯಕ್ಷರನ್ನಾಗಿ ಮಾಡಿದರು. ಬಹುಶಃ ಶಾಲಾ ಉಪಾಧ್ಯಾಯನೊಬ್ಬನಿಗೆ ಇದು ರಾಷ್ಟ್ರಪತಿ ಕೊಡುವ ಪ್ರಶಸ್ತಿಗಿಂತ ಮಿಗಿಲಾದುದೇ ಎನ್ನಬೇಕು.

ಉಗ್ರಾಣರ ಗರಡಿಯಲ್ಲಿ ತಯಾರಾದವರಲ್ಲಿ ಇಂದು ಕನ್ನಡ ಸಾಹಿತ್ಯದಲ್ಲಿ ಹೆಸರಾದ ಹಲವರಿದ್ದಾರೆ. ವಿದ್ವಾಂಸರಾದ ಸೇಡಿಯಾಪು ಕೃಷ್ಣಭಟ್ಟರು, ಮರಿಯಪ್ಪಭಟ್ಟರು, ಜಸ್ಟಿಸ್ ಎಂ. ಗೋವಿಂದ ಭಟ್‌ರು, ಬೆಳ್ತಂಗಡಿ ಗೋಪಾಲಕೃಷ್ಣ, ಐ.ಸಿ.ಎಸ್. ಇವರೆಲ್ಲ ಉಗ್ರಾಣರ ಪ್ರಮುಖ ಶಿಷ್ಯರು. ಉಗ್ರಾಣರ ಸಾನ್ನಿಧ್ಯದಲ್ಲಿ ಅವರೆಲ್ಲ ಬೆಳೆಸಿಕೊಂಡ ಮುಖ್ಯ ಗುಣವೆಂದರೆ ವಿಮರ್ಶನ

ದೃಷ್ಟಿ. ಓದಿದುದನ್ನು ಮನನಮಾಡಿಕೊಂಡು, ಹೃದ್ಗತ ಮಾಡಿಕೊಂಡು ಅದನ್ನು ವಿಮರ್ಶಕನ ದೃಷ್ಟಿಯಲ್ಲಿ – ಆದರೆ ಕವಿಹೃದಯವನ್ನು ಅರಿಯುವ ಒಲವಿನಿಂದ – ನೋಡಬೇಕೆಂಬುದೇ ಉಗ್ರಾಣರ ಆದೇಶ. ಮೇಲಿಂದ ಮೇಲೆ ಕಂಡ ಕವಿತೆಯ ಅರ್ಥದಲ್ಲಿ ಸೌಂದರ್ಯವೂ ಗೋಚರಿಸಲಾರದು; ಕವಿಹೃದಯದ ಆಳವೂ ತಿಳಿಯಲಾರದು. ಅದನ್ನು ನೋಡಬೇಕಾದರೆ, ಅನುಭವಿಸಬೇಕಾದರೆ ಈ ಚಿಕಿತ್ಸಕ ದೃಷ್ಟಿಯನ್ನು ಬೆಳೆಸಿಕೊಳ್ಳಬೇಕು.

೦೦ ೦೦ ೦೦

# ಅನುಬಂಧ

ಈಗ ಉಗ್ರಾಣರು ತಮ್ಮ ಜೀವನದ ಸಂಧ್ಯಾಕಾಲದಲ್ಲಿದ್ದಾರೆ. ತುಂಬುಜೀವನವನ್ನು ಬಾಳಿದ ಅವರು ಅದರ ಸಿಹಿ-ಕಹಿ ನೆನಹುಗಳನ್ನು ನೆನಪಿಸಿಕೊಳ್ಳುವುದರಲ್ಲೇ ಸಮಯ ಕಳೆಯುತ್ತಿದ್ದಾರೆ. ಈ ಪುಸ್ತಿಕೆಯನ್ನು ಬರೆಯುವ ನೆವನದಲ್ಲಿ ಅವರೊಂದಿಗೆ ಕಳೆದ ಸಮಯ ನನ್ನನ್ನೂ ಅವರ ಹಳೆಯ ನೆನಹುಗಳಲ್ಲಿ ಅವರು ತೇಲಿಸಿದ್ದಾರೆ. ತನ್ನ ಬಗೆಗೆ ಬರೆಯುವಾಗ ಪ್ರಕೃತದ ತನ್ನ ಸ್ಥಿತಿಯ ವಿಚಾರವನ್ನೂ ಸೇರಿಸುವುದು ಯೋಗ್ಯವೆಂದು ಅವರು ಅಭಿಪ್ರಾಯಪಟ್ಟರು.

ಎಪ್ಪತ್ತೆಂಟನೆಯ ವಯಸ್ಸಿನಲ್ಲಿರುವ ಉಗ್ರಾಣರು ಈಗ ಪೂರ್ಣವಾಗಿ ದೃಷ್ಟಿಯನ್ನು ಕಳಕೊಂಡಿರುವುದು ದುರದೃಷ್ಟಕರ. ಅವರದೇ ಮಾತಿನಲ್ಲಿ ಹೇಳುವುದಾದರೆ "ಸ್ಪರ್ಶಗತಿ"ಯಿಂದಲೇ ಅವರು ಮನೆಯಲ್ಲಿ ತಿರುಗುತ್ತಿದ್ದಾರೆ. ಈ ಸ್ಪರ್ಶಗತಿ ಎಂಬ ಶಬ್ದವೂ ಅವರದೇ. ೧೯೬೯ರಲ್ಲಿ ಅವರು ಮುಂಬಯಿಯಿಂದ ಬೆಂಗಳೂರಿಗೆ ಕೆರೆವಿಲೆ ವಿಮಾನದಲ್ಲಿ ಕೂತು ಪ್ರಯಾಣ ಮಾಡಿದ್ದರು. ಮೊದಲೇ ರಕ್ತದ ಒತ್ತಡವಿದ್ದುದರಿಂದ ಈ ವಿಮಾನದ ಹಾರಾಟದಿಂದ ತೊಂದರೆಯಾಗಿ ಅವರ ಅಕ್ಷಿಪಟಲದ ರಕ್ತಸ್ರಾವವಾಯಿತು. 'ಗ್ಲೂಕೋಮಾ' ಆಗಿ ದೃಷ್ಟಿ ಹೋಯಿತು. ಮತ್ತೊಮ್ಮೆ ಇದೇ ರೀತಿ ಕೆರೆವಿಲೆ ವಿಮಾನದಲ್ಲಿ ಮುಂಬಯಿಗೆ ಹಿಂದಿರುಗಿ ಕಣ್ಣಿನ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡರು. ಅನಂತರ ಕೆಲವು ದಿನ ದೃಷ್ಟಿಯೂ ಬಂದಿತ್ತು. ಆದರೆ ಮತ್ತೆ ಕೆಟರೆಕ್ಟ್ ಚಿಗುರಿ, ಶಸ್ತ್ರಕ್ರಿಯೆ ಮಾಡಿದರೂ ಏನೂ ಉಪಯೋಗವಿಲ್ಲದೆ ಪೂರ್ಣ ದೃಷ್ಟಿ ಹೋಯಿತು.

ಮುಂಬಯಿಯಲ್ಲಿ ೧೯೭೦ರಲ್ಲಿ ಮುದ್ದಣ ಶತಮಾನೋತ್ಸವ ನಡೆದಾಗ ಉಗ್ರಾಣರನ್ನು ಕರೆಸಿದ್ದೆವು; ಅವರು ತನ್ನ ಹಳೆಯ ನೆನಪುಗಳನ್ನು ಕನ್ನಡಿಗರಲ್ಲಿ ಹಂಚಿಕೊಂಡಿದ್ದರು. ಕನ್ನಡದ ಹಿರಿಯ ಸಾಹಿತಿಗಳು ಯಾರು ಮುಂಬಯಿಗೆ ಬಂದರೂ ಉಗ್ರಾಣರನ್ನು ಕಂಡೇ ಹೋಗುತ್ತಾರೆ. ಆಗಾಗ ಮುಂಬಯಿಗೆ ಹೆಚ್ಚಾಗಿ ಬರುವ ಕಾರಂತ, ಬೇಂದ್ರೆ ಅವರಂತೂ ಸರಿ – ಬಂದಾಗಲೆಲ್ಲ ಅವರನ್ನು ಭೇಟಿಯಾಗುತ್ತಾರೆ.

"ಜೀವನದಲ್ಲಿ ಗುಲಾಬಿಹೂವನ್ನೇ ಕಂಡೆ – ಮುಳ್ಳುಗಳನ್ನಲ್ಲ" ಎಂಬ ಧೋರಣೆಯಿಂದ ಇರುವ ಉಗ್ರಾಣರು ಈ ಸ್ಥಿತಿಯಲ್ಲೂ ಸಂತೃಪ್ತರೆಂದೇ ಹೇಳಬೇಕು.

——(೦)——

# ಉ.ಮ.ರಾ.ರ ಕೃತಿ, ಲೇಖನಗಳ ಸೂಚಿ

ಉತ್ತಮ ಕವಿಯಾಗಿ, ವಿಮರ್ಶಕನಾಗಿ ಉಮರಾರು ಸಾಹಿತ್ಯ ಸೇವೆಯನ್ನು ಸಲ್ಲಿಸಿದಂತೆ, ಪ್ರಾಚೀನ ಕಾವ್ಯ ಸಂಪಾದನಾ ಕಾರ್ಯದಲ್ಲೂ, ಪಠ್ಯ ಪುಸ್ತಕಗಳ ರಚನೆಯಲ್ಲೂ ಹಿರಿದಾದ ಸೇವೆಯನ್ನು ಸಲ್ಲಿಸಿದ್ದಾರೆ. ಶ್ರೀಯುತರು ಸಂಪಾದಿಸಿದ ಭರತೇಶ ವೈಭವವು ಇಂದಿಗೂ ಆದರ್ಶಪ್ರಾಯವಾಗಿದೆ. ಶ್ರೀ ಶಿವರಾಮ ಕಾರಂತರು ಪ್ರಕಟಿಸಿದ ಕೌಶಿಕ ರಾಮಾಯಣದ ಸಂಪಾದನಾ ಕಾರ್ಯದಲ್ಲಿ ಉಮರಾರ ಶ್ರಮವೂ ಮಾರ್ಗದರ್ಶನವೂ ಇದೆ. ಕಳೆದ ಕೆಲವು ದಶಕಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಶಾಲಾ ವಿದ್ಯಾರ್ಥಿಗಳು ಅ–1 ಮಟ್ಟದ ಕನ್ನಡ ಶಿಕ್ಷೆಗಳನ್ನು ಪಡೆಯುವ ಭಾಗ್ಯವು ಉಮರಾರಂತಹ ನಿಷ್ಣಾತರ ಕಾಯಕದ ಫಲವಾಗಿದೆ. ಆ ಶಿಕ್ಷೆಗಳು ಇಂದಿಗೂ ಅನುಕರಣೀಯವೆನ್ನುವುದರಲ್ಲಿ ಸಂದೇಹವಿಲ್ಲ. ಅವುಗಳಲ್ಲಿ ನವೀನವಾದ ವ್ಯಾಕರಣ ಅಭ್ಯಾಸ(Exercise) ಗಳನ್ನು ಶ್ರೀಯುತರು ಜೋಡಿಸಿದ್ದರು. ಅಂತಹ ಕನ್ನಡ ಪಠ್ಯಪುಸ್ತಕಗಳು ಇಂದಿಲ್ಲವಲ್ಲವೆಂಬ ಕೊರಗು ನಮ್ಮದಾಗಿದೆ.

ಈ ಸೂಚಿ ರಚನೆಗೆ ಆವಶ್ಯವಿದ್ದ ಕೆಲವು ವಿವರಗಳು ಸಿಗದ ಕಾರಣ ಇದು ಎಷ್ಟು ಸಮಗ್ರವಾಗಬಹುದಿತ್ತೊ ಅಷ್ಟು ಆಗಿಲ್ಲ. ತಮ್ಮ ಹೆಸರನ್ನು ನಮೂದಿಸದೆ ಉಮರಾರು ಹಲವಾರು ಪಾಠಗಳನ್ನೊ, ಕವನಗಳನ್ನೋ ರಚಿಸಿ ಪಠ್ಯ ಪುಸ್ತಕಗಳಲ್ಲಿ ಪ್ರಕಟಿಸಿರುವರು. ಈ ಕಾರ್ಯದಲ್ಲಿ ನೆರವನ್ನಿತ್ತ ಗೆಳೆಯರಿಗೆ – ಮುಖ್ಯವಾಗಿ ಶ್ರೀ ಬಿ. ದಾಮೋದರ ಬಾಳಿಗರಿಗೆ, ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

—ಶೇಖರ ಇಡ್ಯ

## (ಅ) ಕಾವ್ಯ ಸಂಪಾದನೆ

**ಭರತೇಶ ವೈಭವ** (ರತ್ನಾಕರವರ್ಣಿಕೃತ)
I ಭೋಗ ವಿಜಯ 1918
II ದಿಗ್ವಿಜಯ 1924
III ಯೋಗವಿಜಯ 1925
ಜೈನ ಯುವಕ ಸಂಘದವರಿಂದ ಪ್ರಕಾಶಿತ

**ವರ್ಧಮಾನ ಪುರಾಣ**
ಬಾಹುಬಲಿ ಕವಿಯು ರಚಿಸಿದ್ದು – ಇನ್ನೂ ಅಪ್ರಕಟಿತ.

**ಕಾವ್ಯರತ್ನಾಕರ**
ಆಧುನಿಕ ಕವಿಗಳ ಕವನಗಳ ಸಂಕಲನ – ಹಲವು ಮುದ್ರಣಗಳನ್ನು ಕಂಡಿದೆ.
ಮಂಗಳೂರು, ಬಾಲಸಾಹಿತ್ಯ ಮಂಡಳ, 1925, 1927, 1936.

**ಸಾಹಿತ್ಯ ಮಣಿಮಾಲೆ**
ಹೊಸ ಕವನಗಳ ಇನ್ನೊಂದು ಸಂಗ್ರಹ
ಮಂಗಳೂರು, ಬಾಸೆಲ್ ಮಿಶನ್ ಪ್ರೆಸ್, 1930.

## (ಆ) ವ್ಯಾಕರಣ

**ನೂತನ ಶಾಲಾ ವ್ಯಾಕರಣ**
ಪ್ರೌಢಶಾಲಾ ವಿದ್ಯಾರ್ಥಿಗಳಿಗಾಗಿ
ಮಂಗಳೂರು, ಬಾಳಿಗಾ ಎಂಡ್ ಸನ್ಸ್, 1949

**ನೂತನ ಬಾಲ ವ್ಯಾಕರಣ**
(ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಿಗಾಗಿ)
ಮಂಗಳೂರು, ಬಾಳಿಗಾ ಎಂಡ್ ಸನ್ಸ್, 1950.

## (ಇ) ಕನ್ನಡ ಪಠ್ಯಪುಸ್ತಕಗಳು

**ಮೆಕ್ಮಿಲನರ ಕನ್ನಡ ಪಾಠ ಪುಸ್ತಕಾವಳಿ**
– 3ನೇಯ ದರ್ಜೆಯ ವಿದ್ಯಾರ್ಥಿಗಳಿಗಾಗಿ.

**ಮೆಕ್ಮಿಲನರ ಕನ್ನಡ ಪಾಠ ಪುಸ್ತಕಾವಳಿ**
– 4ನೆಯ ದರ್ಜೆಯ ವಿದ್ಯಾರ್ಥಿಗಳಿಗಾಗಿ
ಶ್ರೀ ಶ್ರೀನಿವಾಸ ಕಿಣಿಯವರ ಜತೆಯಲ್ಲಿ ಸಂಪಾದಿಸಿದ ಪಠ್ಯಗಳಿವು 1936.

ಶ್ರೀ ಎಂ. ರಾಮನ್ ನಂಬಿಯಾರ್ ಮತ್ತು ಶ್ರೀ ಬಿ. ದಾಮೋದರ ಬಾಳಿಗರ ಜತೆಯಲ್ಲಿ ಸಂಪಾದಿಸಿದ ಪಠ್ಯಗಳು – ಮ್ಯಾಕ್‌ಮಿಲನ್ ಎಂಡ್ ಕಂಪನಿಯವರಿಂದ ಪ್ರಕಟವಾಗಿ ದೀರ್ಘಕಾಲ ಬಳಕೆಯಲ್ಲಿದ್ದವು. ಪ್ರಥಮ ಮುದ್ರಣ 1939.

**ಮಾಧ್ಯಮಿಕ ಕನ್ನಡ ಪಾಠಮಾಲೆ, 1, 2, 1950**

**ನೂತನ ಪ್ರೌಢಪಾಠಮಾಲಿಕೆ**
1 ರಿಂದ 8 ಫಾರ್ಮುಗಳಿಗಾಗಿ, ಬಾಸೆಲ್ ಮಿಶನ್, 1949.

## (ಈ) ನಾಟಕಗಳು, ಸಂವಾದಗಳು

**ಮೂರು ಕಾಗೆ ಕಾರಿದರು** (ನಾಟಕ)
ಕನ್ನಡ ನೂತನ ಪಾಠಮಾಲೆ 3 – 1949.

**ಲೋಭಿ ಪ್ರಹಸನ (ನಾಟಕ)**
ಕನ್ನಡ ಕೋಗಿಲೆ

## (ಎ) ಕಥೆಗಳು

**ಕಬ್ಬು ಡೊಂಕಾದರೂ ಸವಿ ಡೊಂಕೆ ?**
ಕರ್ನಾಟಕ ಕೇಸರಿ

**ಕಂಬಳಿಯ ಕಥೆ**
ಮಾಧ್ಯಮಿಕ ಕನ್ನಡ ಪಾಠಮಾಲೆ – ದ್ವಿತೀಯ ಪಾಠ, ಮಾಕ್ಮಿಲನ್– 1950.

**ಕಾಮರೂಪ**
(ಇಂಗ್ಲಿಷ್ ಕಥೆಯೊಂದನ್ನು ಆಧರಿಸಿ)
ಪಠ್ಯಪುಸ್ತಕದಲ್ಲಿ ಪ್ರಕಟವಾದುದು.

**ಕುರುಡನಿಗೆ ಕಣ್ಣು ಬರುವುದೆ ?**
ಮಾಧ್ಯಮಿಕ ಕನ್ನಡ ಪಾಠಮಾಲೆ 'ಮ್ಯಾಕ್‌ಮಿಲನ್' – 1950
(ದ್ವಿತೀಯ ಭಾಗ)

**ದಾಸಪ್ಪ ಕಾಮತರು ಮೋಸಹೋದರು, ನಿಶ್ಚಯ ತಾಂಬೂಲ**
ಕರ್ಣಾಟಕ ಕೇಸರಿ

**ರಾಯಚರಣ**
ಟಾಗೋರರ ಒಂದು ಕಥೆಯ ಅನುವಾದ

**ಸವಣರು ಮರುಳರಲ್ಲ**
(ನಯಸೇನನ ಧರ್ಮಾಮೃತದ ಕಥೆಯೊಂದನ್ನು ಆಧರಿಸಿ)
ಮಾಧ್ಯಮಿಕ ಕನ್ನಡ ಪಾಠಮಾಲೆ – ದ್ವಿತೀಯ ಪಾಠ 'ಮ್ಯಾಕ್‌ಮಿಲನ್, 1950

**ಕೊಳೂರು ಕೊಡಗೂಸು**

## (ಏ) ಬಿಡಿಬರಹಗಳು–ಸಾಹಿತ್ಯಿಕ

**ಅದ್ಭುತ ರಾಮಾಯಣ**
ಮುದ್ದಣ – ಲಕ್ಷ್ಮೀನಾರಣಪ್ಪನವರ ಜೀವನಚರಿತ್ರೆ ಮತ್ತು ಗ್ರಂಥಗಳ ವಿಮರ್ಶೆ, 1926.

**ಉತ್ತರ ರಾಮಚರಿತೆ**
ವಿಜಯ ಸಾಹಿತ್ಯಮಾಲೆ (ಸುರತ್ಕಲ್) ಅವರಿಂದ ಪ್ರಕಾಶಿತವಾದ ಕಾವ್ಯಕ್ಕೆ ಮುನ್ನುಡಿ 1963.

**ಕಬ್ಬಿಗರ ಕಾವ**
ಕನ್ನಡ ಸಹಕಾರಿ 1922
ನೂತನ ಪ್ರೌಢ ಪಾಠಮಾಲೆ, 1950.

**ಕವಿಕುಂಜರ**
ಬಾಲಸಾಹಿತ್ಯ ಪಾಠಗಳು

**ಕಾವ್ಯಮಯಂ ಜಗತ್**
ಕನ್ನಡ ಕೋಗಿಲೆ
'ಪಂಚಕಜ್ಜಾಯ', ಮಂಗಳೂರು ಸಾಹಿತ್ಯ ಸಮ್ಮೇಳನ ಸಂಚಿಕೆ, 1927.

**ಕುಮಾರವ್ಯಾಸ ಭಾರತದ ಕಥಾ ನಾಯಕನಾರು ?**
ರಾಷ್ಟ್ರಬಂಧು ಯುಗಾದಿ ಸಂಚಿಕೆ 14–4–1930.

**ಕುಮಾರವ್ಯಾಸ ಭಾರತವು ಪುರಾಣವೋ ಕಾವ್ಯವೋ?**
ಕುಮಾರವ್ಯಾಸ ಪ್ರಶಸ್ತಿ – ಬಿ.ಎಂ.ಶ್ರೀ. ಸಂಪಾದಿತ 1930.
**ಜಯನೃಪ ಕಾವ್ಯ**

ಕನ್ನಡ ಸಾಹಿತ್ಯ ಪರಿಷತ್ತಿನಿಂದ ಬಹುಮಾನಿತ ಪ್ರಬಂಧ, ನೂತನ ಪ್ರೌಢ ಪಾಠಮಾಲೆ, 1950.

**ಭರತೇಶ ವೈಭವದ ವಿಮರ್ಶಾತ್ಮಕ ಪೀಠಿಕೆ**
'ಭೋಗವಿಜಯ' (1918) ದಲ್ಲಿದೆ

**ಪಂಪರಾಮಾಯಣ**
ಪಠ್ಯಪುಸ್ತಕದಲ್ಲಿ ಪ್ರಕಟವಾಗಿದೆ.

**ಸಾಹಿತ್ಯವಿಹಾರ**
ಸಂಭಾವನೆ (ಬೆಂಗಳೂರು) ಬಿ.ಎಂ.ಶ್ರೀ. ಅವರಿಗೆ ಅರ್ಪಿಸಿದ ಸಂಪುಟ 1941.

**ರತ್ನಾಕರ ಸಿದ್ಧ**
ವಿವೇಕಾಭ್ಯುದಯ, 1952.

## (ಒ) ಬಿಡಿಬರಹಗಳು–ವಿವಿಧ

**ಆಂಧ್ರಕುಲದ ರಾಮರಾಜ**

ಪ್ರೌಢ ಪಾಠಮಾಲೆ – ದ್ವಿತೀಯ ಭಾಗ – 1931.

**ಎಚ್ಚಣ್ಣನ ಕೀರ್ತಿಯ ನಿಚ್ಚಣಿಕೆ (ವಿಡಂಬನ)**

**ಕುರಿಯ ವಿಠಲಶಾಸ್ತ್ರಿ**

ಶ್ರೀ ಕುರಿಯ ವಿಠಲ ಶಾಸ್ತ್ರಿಗಳ ಅಭಿನಂದನ ಗ್ರಂಥ.

**ಧರ್ಮಸ್ಥಳ ಯಾತ್ರೆ**

ಕನ್ನಡ ನಾಲ್ಕನೆಯ ಪುಸ್ತಕ 'ಮ್ಯಾಕ್‌ಮಿಲನ್' 1935

**ಶ್ರೀ ಪಂಜೆ ಮಂಗೇಶರಾಯರು**

'ಪಂಜೆಯವರ ನೆನಪಿಗಾಗಿ', 1952.

**ಯಕ್ಷಗಾನ ಪ್ರಗತಿ – ತಾಳಮದ್ದಳೆ**

'ಯಕ್ಷಗಾನ ಬಲಿಪ ನಾರಾಯಣ ಭಾಗವತರ ಸ್ಮರಣ ಸಂಪುಟ 1968

**ರಾಷ್ಟ್ರಕವಿ ಗೋವಿಂದ ಪೈ**

ದೀವಿಗೆ, ಕುಂದಾಪುರದಲ್ಲಿ ಪ್ರಕಟವಾದ ಶ್ರೀ ಪೈಯವರ ನೆನಹಿನ ಗ್ರಂಥ, 1964

**ವಿಗ್ರಹಾರಾಧನೆ**

ಕಂಠೀರವದಲ್ಲಿ 2 ಭಾಗಗಳಾಗಿ ಪ್ರಕಟಿತವಾಯಿತು

**ಸ್ವರ್ಣಸ್ನೇಹ**

'ಕಾರಂತ ಪ್ರಪಂಚ', 1969.

**ಸಂಗೀತ**

ತ್ಯಾಗರಾಜ ಮಹೋತ್ಸವದ ಸವಿಸಂಚಿಕೆ, ಕಾಂಚನ, 1968

**ಸೋಮನಾಥ ಯಾತ್ರೆ**

ಕನ್ನಡ ನೂತನ ಪಾಠಮಾಲೆ – 6, 1939.

**ದ್ರೋಣ ದ್ರುಪದ ಸಂವಾದ**
ಪಠ್ಯಪುಸ್ತಕದಲ್ಲಿ ಪ್ರಕಟವಾದುದು.

**ಸೊಹ್ರಾಬ್ ರುಸ್ತುಂ ಸಂವಾದ**
ಕನ್ನಡ ನೂತನ ಪಾಠಮಾಲೆ – 6, 1939 ಮತ್ತು ಬಾಲಸಾಹಿತ್ಯ ಪಾಠಗಳು

**ಗೋಪಾಲರಾವ್ – 1949**

**ಹರಿಶ್ಚಂದ್ರ–ವಿಶ್ವಾಮಿತ್ರ ಸಂವಾದ (ಹರಿಶ್ಚಂದ್ಯನ ರಾಜ್ಯದಾನ)**
ಮ್ಯಾಕಮಿಲನರ ಕನ್ನಡ ಪಾಠ ಪುಸ್ತಕಾವಳಿ, 7ನೆಯ ಪುಸ್ತಕ 1925.

**ಹ್ಯೂಬರ್ಟ್ ಆರ್ಥರ್ ಸಂವಾದ (ಅನುವಾದ)**
ಮಾಧ್ಯಮಿಕ ಕನ್ನಡ ಪಾಠಮಾಲೆ 'ಮ್ಯಾಕಮಿಲನ್' 1950.

## (ಉ) ಅನುವಾದ

**ಡಾನ್‌ಕ್ವಿಕ್ಸೋಟ್** – ಸರ್ವೆಂಟಿಸನ ವಿಖ್ಯಾತ ಕಾದಂಬರಿಯ ಅನುವಾದ
ಬಾಳಿಗ ಎಂಡ್ ಸನ್ಸ್, ಮಂಗಳೂರು, 1949.

## (ಊ) ಕವನಗಳು

**ಆವುದು ಹಿತವು ನಿನಗೆ ದೇವಿ ಭಾರತಿ ಹೇಳು**
'ನಮ್ಮ ಕವಿತೆಗಳು', ಮಿತ್ರಮಂಡಳಿ (ಮಂಗಳೂರು)ಯ ಕವನಸಂಕಲನ, 1939

**ಇಳೆಯೊಳುತ್ತಮ ವಸ್ತು**
ಮಾಧ್ಯಮಿಕ ಕನ್ನಡ ಪಾಠಮಾಲೆ – 1950.

**ಎನ್ನ ಮುದ್ದಿನ ಗಿಣಿ**
'ಪಂಚಕಜ್ಜಾಯ' ಮಂಗಳೂರಲ್ಲಾದ ಕನ್ನಡ ಸಾಹಿತ್ಯ ಸಮ್ಮೇಳನಸಂಚಿಕೆ, 1927. ಮತ್ತು ಕನ್ನಡ ನೂತನ ಪಾಠಮಾಲೆ – 6, 1939, ಕನ್ನಡ ಮಾಧ್ಯಮಿಕ ಪಾಠಮಾಲೆ–1, 1950.

**ಎಲೆ ಮಾಯಾ ಪುಷ್ಪಮೆ**

‘ಕನ್ನಡ ಕೋಗಿಲೆ’ಯಲ್ಲಿ ಪ್ರಕಟವಾದುದು ಮತ್ತು ಮಂಗಳೂರಿನ ‘ನಮ್ಮ ಕವಿತೆಗಳು’ ಮಿತ್ರ ಮಂಡಳಿ – 1939.

**ಏಳುವುದು ಸುಖವಣ್ಣ**

‘ಕನ್ನಡ ಕವಿತಾಂಕುರ’, ಬಾಸೆಲ್ ಮಿಶನ್ ಪ್ರೆಸ್ 1949, ಮಾಧ್ಯಮಿಕ ಕನ್ನಡ ಪಾಠಮಾಲೆ, 1950.

**ಕಥೆಯಲ್ಲದ ಕಥೆ (ಸಾಂಗತ್ಯ)**

‘ಮೊದಲನೆಯ ಪದ್ಯ ಪುಸ್ತಕ’, ಬಾಸೆಲ್ ಮಿಶನ್ ಪ್ರೆಸ್,
ಕನ್ನಡ ನಾಲ್ಕನೆಯ ಪುಸ್ತಕ, ಶ್ರೀನಿವಾಸ ಕಿಣಿ ಎಂಡ್ ಉ.ಮ.ರಾ. – 1935.

**ಕಲಾಮಹಿಮೆ**

ಕಾವ್ಯ ರತ್ನಾಕರ – 1925. ಕನ್ನಡ ನೂತನ ಮಾಲೆಗಳಲ್ಲೂ ಇದೆ.

**ಕನಕಾಂಗಿ**

‘ಕಾವ್ಯ ರತ್ನಾಕರ’, ಬಾಲಸಾಹಿತ್ಯ ಮಂಡಳ, 1936

**ಕಾ ಕಾ, ಕಾ ಕಾ, ಕಾ ಕಾ, ಕೋಗಿಲೆಯೆಂದರಿಯದೆ ನಿನ್ನಂ ಪೊರೆದೆಂ**

ಕನ್ನಡ ಕೋಗಿಲೆ

**ಕಾರ್ಕಳದಲ್ಲಿ ಸೂರ್ಯೋದಯ**

ಕಾವ್ಯ ರತ್ನಾಕರ – 1927.

**ಕಿಂಗ್ ಲಿಯರ್**

ಕನ್ನಡ ನೂತನ ಪಾಠಮಾಲೆ 2 ಮ್ಯಾಕ್‌ಮಿಲನ್, 1939.

**ಡೊಂಬರಾಟ**

ಕಾವ್ಯರತ್ನಾಕರ – 1925.

**ನನ್ನ ಮನೆ (ತನ್ನ ಮನೆ)**

ಹೊಸ ಕನ್ನಡ ಮೂರನೆಯ ಪುಸ್ತಕ ‘ಬಾಲಸಾಹಿತ್ಯ ಮಂಡಳಿ’ 1939.

**ನನ್ನ ಹಾಸಿಗೆ (ದ್ವಿಪದಿ)**

ಕನ್ನಡ ನಾಲ್ಕನೆಯ ಪುಸ್ತಕ, ಶ್ರೀನಿವಾಸ ಕಿಣಿ ಮತ್ತು ಉ.ಮ.ರಾ., 1935.

**ನುತ ಶಬ್ದಾಲಂಕಾರದೊಳತಿಶಯಮದು ಕನ್ನಡಕ್ಕೆ ಸತತಂ ಪ್ರಾಸಂ**

ಕನ್ನಡ ಕೋಗಿಲೆ, ಮಾರ್ಚ್ 1917

**ನಿದ್ರೆ, ಪಂಜರದ ಗಿಳಿ**

ಕನ್ನಡ ನೂತನ ಪಾಠಮಾಲೆ 4ನೆಯ ಪುಸ್ತಕ ಮೆಕ್ಮಿಲನ್ ಎಂಡ್ ಕೋ.

**ರಂಗ ಹಿತ್ತಲಲ್ಲಿ ಆಡು**

ಕನ್ನಡ ನೂತನ ಪಾಠಮಾಲೆ, ಮ್ಯಾಕ್‌ಮಿಲನ್, 1940.

**ಷೇಕ್ಸ್‌ಪಿಯರ್**

ಮಿಲ್ಟನನಿಂದ – ಅನುವಾದ.

**ಶಾಂತತೆ**

ಆಂಗ್ಲಕವಿ ಥಾಮಸ್ ಹುಡ್‌ನ 'ಸೈಲೆನ್ಸ್' ಕವನದ ಅನುವಾದ

**ಸಹಕಾರ**

ಕನ್ನಡ ನಾಲ್ಕನೆಯ ಪುಸ್ತಕ ಮಾಕ್ಮಿಲನ್–1935.

**ಹಕ್ಕಿಯ ಜಗತ್ತು**

ಕನ್ನಡ ನೂತನ ಪಾಠಮಾಲೆ, 2, ಮ್ಯಾಕ್‌ಮಿಲನ್, 1939

**ಹಲ್ಲಿ ಕೂತಿರುವೆ ಏಕಲ್ಲಿ**

ಕನ್ನಡ ನೂತನ ಪಾಠಮಾಲೆ–2, 1939.

---

# ನವೋದಯ ಪ್ರಚಾರ ಪುಸ್ತಕಮಾಲೆ

## ಅಚ್ಚಾದುವು

ಕಲಾವಿದ ಕೃಷ್ಣ ಹೆಬ್ಬಾರರು
ಬೇಂದ್ರೆ
ಕಾರ್ಲ್‌ಮಾರ್ಕ್ಸ್
ಶಿವರಾಮ ಕಾರಂತ
ಪು. ತಿ. ನರಸಿಂಹಾಚಾರ್ಯ
ಟಿ. ಎಸ್. ಈಲಿಯಟ್
ಮಾಸ್ತಿ ವೆಂಕಟೇಶ ಐಯಂಗಾರ್
ಕಡೆಂಗೋಡ್ಲು ಶಂಕರ ಭಟ್ಟ
ಶ್ರೀರಂಗ
ಅ. ನ. ಕೃಷ್ಣರಾಯರು
ಬದುಕುವ ದಾರಿ
ಶ್ರೀಕೃಷ್ಣ ದೌತ್ಯ
ಪುರಂದರದಾಸರು
ಸೇಡಿಯಾಪು ಕೃಷ್ಣಭಟ್ಟ
ಮುದ್ದಣ
ಗೋವಿಂದ ಪೈಗಳ ಕಾವ್ಯ
ವಿ.ಸೀ.
ಕನ್ನಡ ಕಟ್ಟಿದವರು
ಹುರುಳಿ ಭೀಮರಾಯರು

## ಅಚ್ಚಿನಲ್ಲಿ

ಮುಳಿಯ ತಿಮ್ಮಪ್ಪಯ್ಯ
ಎಸ್. ವೆಂಕಟರಾಜ
ಪಂಜೆ ಮಂಗೇಶರಾಯರು
ಕಯ್ಯಾರ ಕಿಞ್ಞಣ್ಣ ರೈ